ಮಾತನ್ನು ನಂಬಲಾರದೆ ನಂಬಲು ಇಚ್ಛಿಸದೆ – ಮತ್ತೆ ಮತ್ತೆ ಕೇಳಿದನು, ಅದೇ ಉತ್ತರ. ಖಿನ್ನನಾಗಿ

"ನಡೆ ಅವನೀ. ಮಲ್ಲಿಕ್ ಅರಮನೆಗಾದರೂ ಹೋಗೋಣ." ಎಂದು ಹೇಳಿದನು. ಗೆಳೆಯರಿಬ್ಬರೂ ಅರಮನೆಯನ್ನು ಸೇರುವ ಹೊತ್ತಿಗೆ ಅಲ್ಲಿನ ಬಾಗಿಲು ಮುಚ್ಚಲ್ಪಡುತ್ತಿತ್ತು. ಈ ಎರಡನೆಯ ಆಶಾ ಭಂಗಕ್ಕೆ ವಾಣಿಯ ಉತ್ಸಾಹವು ಮತ್ತಷ್ಟು ಉಡುಗಿ ಹೋಯಿತು. ಮನಸ್ಸಿನಲ್ಲಿ ವಿಪರೀತವಾಗಿ ಬಗೆಬಗೆಯ ಭಾವನೆಯ ಬಳ್ಳಿಗಳು ಸುಳಿಯಲಾರಂಭಿಸಿದವು. ಸ್ವಲ್ಪ ದೂರ ನಡೆದಾನಂತರ ಅವನೀಶನನ್ನು ಕುರಿತು

"ಅವನೀ. ಇಂದೇ ರಾತ್ರಿ ನಾನು ಶಾಂತಿನಿಕೇತನಕ್ಕೆ ಹೊರಟು ಬಿಡುತ್ತೇನೆ."

"ಯಾರಾದರೂ ನಿನ್ನನ್ನು ಹುಚ್ಚನೆಂದಾರು ವಾಣಿ. ಇಷ್ಟು ಸಣ್ಣ ವಿಚಾರಗಳಿಗೆಲ್ಲಾ ಮನಸ್ಸು ಹಾಕಿದರೆ ಹೇಗೆ ಹೇಳು – ಮುಂದೆ ನೀನು ಏಳ್ಗೆಯಾಗುವುದಾದರೂ ಹೇಗೆ ?"

"ಗಂಗೂಲಿಯವರ ದರ್ಶನ ದೊರೆಯದಿರುವುದು ನನ್ನನ್ನು ಬಹಳ ನಿರಾಶಗೊಳಿಸಿದೆ."

"ಅಯ್ಯೋ ಹುಚ್ಚಾ, ಮುಂದಿನ ಸಲ ಬಂದಾಗ ನೋಡಿದರಾಯಿತು. ಅದಕ್ಕಿಷ್ಟು ವ್ಯಥೆಯೇ ? ನಾನು ಹೇಳಿದ್ದು ಮರೆತೆಯೋ ? – ಎಂಟು ಗಂಟೆಗೆ ನಿನ್ನ ದರ್ಬಾರು ಪರಿಸಮಾಪ್ತಿಯಾಗಿ ಬಿಡಬೇಕು."

"ಆ ಮೇಲೆ ಎಲ್ಲಿಗೆ ಹೋಗುವುದು ?"

"ಅದು ಈಗೇತಕ್ಕೆ ? ಮುಂದೆ ನಿನಗೇ ಗೊತ್ತಾಗುವುದು."

ಎಂಟು ಘಂಟೆಗೆ ಇನ್ನೂ ಒಂದು – ಒಂದೂವರೆ ಘಂಟೆಯಷ್ಟು ವಿರಾಮವಿತ್ತು. ವಾಣಿಯು ನಗರದ ಸೂಕ್ಷ್ಮ ಪರಿಚಯಕ್ಕೆ ಹೊರಟನು. ನಿರುದ್ಯೋಗಿಗಳಾಗಿ ಅಲ್ಲಿ ಇಲ್ಲಿ ಗುಂಪು ನಿಂತು ಹೋಗಿ ಬರುವವರನ್ನೇ ಎವೆಯಿಕ್ಕದೆ ನೋಡುವವರ ತಂಡ ಒಂದು ಕಡೆ; ಔಷಧಿ ಪಥ್ಯಗಳನ್ನು ಮಾರುವವರು ಮಾಡುತ್ತಿದ್ದ ಯಕ್ಷಿಣಿ ಆಟವನ್ನು ನೋಡುತ್ತ ನಿಂತಿದ್ದವರ ತಂಡ ಒಂದು ಕಡೆ; ಸುಪಾರಿ ಅಂಗಡಿಗಳ ಮೇಲೆ ಕುಳಿತು ವ್ಯಾಪಾರಕ್ಕೆ ಬಂದವರ ಮುಖವನ್ನೇ ದಿಟ್ಟಿಸಿ ನೋಡಿ ಅವರು ಹೆದರಿ ಕೊಟ್ಟ ಕಾಸನ್ನು

ಲಕ್ಷಿಸದೆ ಓಡಿಹೋಗುವಂತೆ ಮಾಡುತ್ತಿದ್ದವರ ಸಣ್ಣಪುಟ್ಟ ತಂಡಗಳನ್ನು ನೋಡುತ್ತಾ ಮಾನವಜೀವನದ ದುರ್ವ್ಯಯವನ್ನು ಆಲೋಚಿಸುತ್ತಾ ಹೊರಟನು.

ಅಲೆದಲೆದು ಆಯಾಸವೂ ಆಗುತ್ತ ಬಂತು; ಮಾಣಿಯು "ದರ್ಬಾರ್" ಮುಗಿಯುವ ಹೊತ್ತೂ ಬಂತು. ಅವನೀಶನು ಮಾಣಿಯನ್ನು ನೋಡಿ

"ಇನ್ನೂ ಏನಾದರೂ ಕೆಲಸವಿದೆಯೋ ಮಾಣಿ."

"ಕೆಲಸವೇನು ಬಂತು. ಈಗೆಲ್ಲಿಗೆ ಹೋಗೋಣ. ಯಾವದಾದರೂ ನಾಟಕವಿದೆಯೇನಯ್ಯ ?"

"ಬೇಕಾದಷ್ಟಿದೆ."

"ಬಹಾದೂರಿಯ ನಾಟಕ ಯಾವದಾದರೂ ಇದೇಯೇನು ? ಆತ ಉತ್ತಮ ನಟ ಎಂದು ಕೇಳಿ ಬಲ್ಲೆ. ಹೋಗೋಣವೇನು ?"

"ಹೋಗೋಣ. ಆದರೆ ಇಂದು ಬೇಡ.... ಇಂದು ನಿನಗೆ ದೊಡ್ಡ ಹಬ್ಬವನ್ನೇರ್ಪಡಿಸಿರುವೆ. ನಾಳೆ ಹೋಗೋಣ ನಾಟಕಕ್ಕೆ" ಎಂದು ಹೇಳುತ್ತಾ ಎದುರಿಗೆ ಹೋಗುತ್ತಿದ್ದ ಟ್ರಾಂ ಗಾಡಿಯನ್ನು ಮಾಣಿಯೊಂದಿಗೆ ಹತ್ತಿದನು. ಅದು ಅಲ್ಲಿ ಸುತ್ತಿ ಇಲ್ಲಿ ಸುತ್ತಿ ಕೊನೆಗೆ ಎಲ್ಲಿಯೋ ನಿಂತಿತು. ಅವನೀಶನು ಇಳಿದನು. – ಜೊತೆಗೆ ಮಾಣಿಯೂ ಇಳಿದನು. ತಾನು ಎಲ್ಲಿಗೆ ಬಂದಿರುವೆನೆಂಬುದರ ಅರಿವೇ ಮಾಣಿಗಿಲ್ಲ: ಮಾತನಾಡದೆ ಅವನೀಶನನ್ನು ಅನುಸರಿಸುತ್ತಾ ನಡೆದನು. ಕೃಷ್ಣಪಕ್ಷದ ಆ ಭಯಂಕರ ರಾತ್ರಿಯು ಬಹುಜನ ಸುಳಿಯದ ಆ ಬೀದಿಗೆ ಒಂದು ಬಗೆಯ ಹಿನ್ನೆಲೆಯನ್ನಿತ್ತಿತ್ತು. ರಸ್ತೆಗೆ ಸಾಕಷ್ಟು ದೀಪಗಳಿಲ್ಲದೆ ಸುಳಿಯುತ್ತಿದ್ದವರ ನೆರಳು ದೀರ್ಘವಾಗಿ ಬಿದ್ದು ದೂರದಲ್ಲಿ ಭೂತಪ್ರೇತಗಳ ನರ್ತನವಾಗುತ್ತಿದೆಯೋ ಏನೋ ಎಂದೆನ್ನಿಸುತ್ತಿತ್ತು. "ತನ್ನನ್ನು ಇಂತಹ ರಾತ್ರಿಯಲ್ಲಿ.... ಇಂತಹ ಜಾಗದಲ್ಲಿ.... ಇಂತಹ ವೇಳೆಯಲ್ಲಿ ಎಲ್ಲಿಗೆ ಕರೆದುಕೊಂಡು ಹೋಗುತ್ತಿರುವನು ಈ ಅವನೀಶ" ಎಂದು ಚಿಂತಿಸಿದನು. ಬಗೆಹರಿಯದಾಯಿತು. ಧೈರ್ಯ ಮಾಡಿ ಅವನೀಶನನ್ನೇ ಕುರಿತು

"ಎಲ್ಲಿಗೆ ಅವನೀ, ಹೋಗುತ್ತಿರುವುದು."

" ನಿನಗೇತಕ್ಕೆ. ಸುಮ್ಮನೆ ಬಾ. ಎಲ್ಲವೂ ತಾನೇ ತಾನಾಗಿ ಗೊತ್ತಾಗುವುದು " ಎಂದು ಪಕ್ಕದ ಸಂದಿಗೆ ತಿರುಗಿದನು. ಸ್ವಲ್ಪ ದೂರ ಅಲ್ಲಿ ನಡೆದು ಮತ್ತೆ ಒಂದು ಸಂದಿಗೆ ತಿರುಗಿದನು. ಈ ವಕ್ರ ವಕ್ರ ಸಂದಿಗಳ ಪೂರ್ಣ ಜ್ಞಾನವು ಅವನೀಶನಿಗೆ ಹೇಗಾಯಿತು ಎಂಬ ಶಂಕೆ. ಮತ್ತೆ " ಎಲ್ಲಿಗೆ ಹೋಗುತ್ತಿರುವುದು ? " ಎಂಬ ಪ್ರಶ್ನೆ. ಮುಂದೆ ಮುಂದೆ ಹೋಗುತ್ತಾ ವಾಣಿಯ ಎದೆಯು ಘಟ್ಟಿಯಾಗಿ ಬಡಿದುಕೊಳ್ಳಲಾರಂಭಿಸಿತು. ಹೋಗಲು ಹಿಂಜರಿದರೆ ಅವನೀಶನು ತನ್ನನ್ನು ಹೇಡಿಯೆಂದು ಎಲ್ಲಿ ಕರೆಯುವನೋ ಎಂಬ ಹೆದರಿಕೆ. ಹೋಗಲು ಹೆದರಿಕೆ. ಮತ್ತೆ ಧೈರ್ಯ ಮಾಡಿ

" ಎಲ್ಲಿಗೆ ನಾವು ಹೋಗುತ್ತಿರುವುದು ಅವನೀಶ್? ಸುಖವಾಗಿ ಬಹಾದೂರಿಯ ನಾಟಕಕ್ಕಾದರೂ ಹೋಗಿದ್ದರೆ ಚೆನ್ನಾಗಿರುತ್ತಿದ್ದಿತಲ್ಲಾ. "

" ಅಯ್ಯೋ ಮೂಢಾ. ಬಹಾದೂರಿಯ ನಾಟಕವು ಎಲ್ಲಿಗೆ ಹೋಗುತ್ತದಯ್ಯಾ – ಸುಮ್ಮನೆ ಬಾ. ಇವತ್ತಿನ ಅನುಭವವನ್ನು ನೀನು ಎಂದಿಗೂ ಮರೆಯುವುದಿಲ್ಲ. "

" ಹಾಗೆಂದರೆ ? "

" ಹಾಗೆಂದರೆ ನಿನ್ನ ಕಲೆಯಲ್ಲಿರುವ ದೊಡ್ಡ ಕುಂದನ್ನು ಇವತ್ತಿನ ಅನುಭವವು ಸರಿಪಡಿಸಿ ಕೊಡುವುದು. ಜೀವನವನ್ನು ಕಣ್ಣು ತೆರೆದು ನೋಡದೆ ಸುಮ್ಮನೆ ಶಾಂತಿನಿಕೇತನದ ಬರಡು ಪ್ರಕೃತಿಯನ್ನು ಚಿತ್ರಿಸುತ್ತ ಕುಳಿತರೆ ನಿನ್ನ ಕಲೆ ಮುಂದಕ್ಕೆ ಬರುವದೇನಯ್ಯಾ ? "

" ನಿನಗೆ ಯಾವದು ' ಬರಡು ಪ್ರಕೃತಿ 'ಯೋ ಅದೇ ನನಗೆ ಕಳೆದುಂಬಿದ – ಜೀವದುಂಬಿದ ಅನಂದನಿಧಿ. ಅದನ್ನು ಸರಿಯಾಗಿ ಚಿತ್ರಿಸುವುದೇ ನನ್ನ ಜೀವನದ ಮಹದಾಶಯ. "

" ಇದು ಕೇವಲ ಆತ್ಮವಂಚನೆಯ ಮಾತು ವಾಣಿ, ನೀನು ಲಂಡನ್ ನಗರವನ್ನು ನಿಜವಾಗಿ ನೋಡದೆ ಚಿತ್ರದಲ್ಲಿ ಕಂಡು ಪ್ರತಿಚಿತ್ರ ಮಾಡಬಲ್ಲೆಯೇನು ? "

" ಮಾಡಬಲ್ಲೆ. ಆದರೆ ಅದು ಉತ್ತಮ ಕಲೆಯಾಗುವುದಿಲ್ಲ. "

" ಹಾಗೆಯೇ ಜೀವನವನ್ನು ನೋಡದೆ ಚಿತ್ರಕಲೆಗೆ ಕೈಹಾಕುವುದು. "

" ನಾನು ಪ್ರಕೃತಿಯನ್ನೇ ನೋಡಿ ಚಿತ್ರಿಸುವೆನಲ್ಲಾ. ಪ್ರಕೃತಿಯ ಚಿತ್ರವನ್ನು ಟರ್ನರ್, ಕಾನ್‌ಸ್ಟೇಬಲ್, ಕೋರೋಯವರ ಚಿತ್ರಗಳಲ್ಲಿ ನೋಡಿ ಚಿತ್ರಿಸಿದ್ದರೆ ನಿನ್ನ ಟೀಕೆ ಸಲ್ಲುತ್ತಿದ್ದಿತು. "

" ಹಾಗಲ್ಲ ಮಾಣಿ. ಜಗತ್ತಿನಲ್ಲಿ ಪ್ರತಿಯೊಂದೂ ಮಾನವಾಧೀನ. ಮರವೇತಕ್ಕೆ ಸೃಷ್ಟಿಯಾಗಿದೆ ? ಮನುಷ್ಯನಿಗೆ ಹಣ್ಣು, ಕಾಯಿ, ನೆರಳು, ಒಣಗಿದ ಮೇಲೆ ಸೌದೆಯನ್ನು ಒದಗಿಸುವುದಕ್ಕಾಗಿಯೇ ಅಲ್ಲವೇ ? ಹೂವು ಏತಕ್ಕೆ ಸೃಷ್ಟಿಯಾಗಿದೆ ? ಮನುಷ್ಯನ ವಿಲಾಸಕ್ಕೆ ಬೆಟ್ಟ ಗುಡ್ಡಗಳೇತಕ್ಕೆ ? ಮನುಷ್ಯನು ತನ್ನ ನೆಲೆಯನ್ನು ಕಟ್ಟಿಕೊಳ್ಳುವುದಕ್ಕಾಗಿ, – ಹೀಗೇ ಪ್ರತಿಯೊಂದೂ ಮಾನವನ ಸುಖ, ವಿಲಾಸ, ಅನುಕೂಲ್ಯಕ್ಕಾಗಿಯೇ ಸೃಷ್ಟಿಯಾಗಿದೆ. ಅಂದರೆ ಮಾನವಜೀವನಕ್ಕೆ ಬೇರೆಯಾದಂತೆ ನಿನ್ನ ಗಿಡಮರ, ಬೆಟ್ಟಗುಡ್ಡ, ಸೂರ್ಯಾಸ್ತ, ಸೂರ್ಯೋದಯಗಳಿಗೆ ಅಸ್ತಿತ್ವವೇ ಇಲ್ಲ. ನಾವು ಗಾನವನ್ನು ಕಲಿಯಬೇಕೆಂದು ಸಂಕಲ್ಪಿಸಿದರೆ ಹೇಗೆ ಗಾಯಕನಲ್ಲಿ ಹೋಗುವೆವೋ ಹಾಗೆ ಗಾನಯಂತ್ರಗಳನ್ನು ಮಾಡುವವನಲ್ಲಿ ಏತಕ್ಕೆ ಹೋಗುವುದಿಲ್ಲ ? ಇವತ್ತು ಪ್ರಕೃತಿಯನ್ನು ನೀನು ಚಿತ್ರಿಸಬೇಕಾದರೆ –ಕೃತಿಯು ಯಾರಿಗಾಗಿ ಸೃಷ್ಟಿಯಾಗಿದೆಯೋ ಅವರಲ್ಲಿ ಹೋಗಬೇಕು. "

" ಅಂದರೆ. "

" ಪುರುಷನು ಸ್ತ್ರೀಯಲ್ಲಿ; ಸ್ತ್ರೀಯು ಪುರುಷನಲ್ಲಿ " ಎಂದು ಹೇಳುತ್ತಿರುವಂತೆ ಒಂದು ಬಾಗಿಲ ಬಳಿ ಬಂದು ನಿಂತು ಅದನ್ನು ತಟ್ಟಿದನು. ಎಲ್ಲಿಂದಲೋ ಕೋಮಲವಾದ ಎಳೆಯ ಶಾರೀರದ ಸುಮಧುರ ಆಲಾಪನೆಯು ಕೇಳಬರುತ್ತಿತ್ತು. ಒಂದೆರಡು ನಿಮಿಷಗಳಾದ ನಂತರ ದೊಡ್ಡದಗಲೆಯ ಷರಾಯಿ ಧರಿಸಿದ್ದ ಒಬ್ಬ ಸ್ಥೂಲ ಮನುಷ್ಯನು ಸ್ವಾಗತ ಬಯಸಿ ಒಳಗೆ ಕರೆದೊಯ್ದು ಕುಳ್ಳಿರಿಸಿದನು.

ವಿಶಾಲವಾದ ಸಭಾಮಂದಿರ. ನೆಲ ಮುಚ್ಚುವಂತೆ ಹಾಸಿರುವ ದೊಡ್ಡದಾದ ಜಮಖಾನದ ಮೇಲೆ ಅಲ್ಲಿ ಇಲ್ಲಿ ಒಂದೊಂದು ರತ್ನಗಂಬಳಿಗಳು. ಗೋಡೆಗಳನ್ನು ಅಪ್ಪಿರುವಂತೆ ಮೆತ್ತನೆಯ ಒರಗು ದಿಂಬುಗಳು. ಅಲ್ಲಲ್ಲಿ ಒಂದೊಂದು ಗುಡುಗುಡಿ; ಮಧ್ಯೆ ಮಧ್ಯೆ ಒಂದೊಂದು ಪಾನ್‌ಸುಪಾರಿಯ

ಪೆಟ್ಟಿಗೆ. ಗೋಡೆಗಳ ಮೇಲೆ ಅಗ್ಗದ ಚಿತ್ರದ ಅಂಗಡಿಗಳಲ್ಲಿ ದೊರೆಯುವ ಚಿತ್ತ್ರಲೆಯು, ಅರೆಬೆತ್ತಲೆಯು ಬೊಂಬೆಗಳು.

ಅವನೀಶ, ಮಾಣಿ ಪ್ರವೇಶಿಸಿದಾಗ ಪ್ರೇಮದಾಸಿಯ ಗಾನ ಒಳ್ಳೆಯ ಹುರುಪಿನಿಂದ ಸಾಗಿತ್ತು. ಬಾಗಿಲೆದುರಾಗಿ ಸರಿಯಾಗಿ ಗಾಯಕಳು, ಅವಳ ಅಕ್ಕಪಕ್ಕದಲ್ಲಿ ೧೮–೨೦ಕ್ಕೆ ಮೀರದ ಇಬ್ಬರು ಸುಂದರಿಯರು ಘನವಾದ ಎರಡು ತಂಬೂರಿಗಳನ್ನು ಮೀಟುತ್ತ ಕುಳಿತಿದ್ದರು. ಅವರ ಹಿಂದೆ ಇಸ್ರಾಜ್, ಸಾರಂಗ್, ತಬಲಗಳನ್ನು ಬಾಜಿಸುತ್ತಾ ಮೂವರು ಮಂಡಿಸಿದ್ದರು. ಸಭೆಯು ಕಿಕ್ಕಿರಿಯದಿದ್ದರೂ ಇದ್ದ ನಾಲ್ವರು ಜನವೇ ಪ್ರೇಮದಾಸಿಯ 'ಪಹಡಿ' ರಾಗಾಲಾಪನೆಗೆ ತಲೆದೂಗುತ್ತ ಕುಳಿತಿದ್ದರು. ಇಪ್ಪತ್ತೆರಡು ಇಪ್ಪತ್ತುನಾಲ್ಕಕ್ಕೆ ಮೀರದ ವಯಸ್ಸು, ಕಪ್ಪುಹಚ್ಚಿದ ಆಳವಾದ ವಿಶಾಲವಾದ ಕಣ್ಣುಗಳು. ತುಂಬಿದ ಕೆನ್ನೆಗಳಿಗೆ ಒಪ್ಪುತಿದ್ದ ನಸುನೀಳವಾದ ನಾಸಿಕ. ಕೋರೆಬೈತಲೆಗೆ ಸರಿಯಾಗಿ ತಿದ್ದಿದ ಮುಂಗುರುಳು. ಕೇಸರಿಬಣ್ಣದ ಸೀರೆ ಕುಪ್ಪಸಗಳನ್ನು ಧರಿಸಿ ಆಗಾಗ್ಗೆ ಸಯುವಾಗಿ 'ಸಮ' ವನ್ನು ಸೂಚಿಸುತ್ತಿದ್ದ ಹಾವಭಾವಗಳಿಗೆ ಗಾನಲೋಲುಪರು ಬೆರಗಾಗಿ ಕುಳಿತಿದ್ದರು. ಅವನೀಶನನ್ನು ಮುಗುಳ್ನಗೆಯಿಂದಲೇ ನಮಸ್ಕರಿಸಿ ಪ್ರೇಮದೇವಿಯು ತನ್ನ ಬಲಭಾಗದಲ್ಲಿದ್ದ ರತ್ನಗಂಬಳಿಯ ಮೇಲೆ ಕುಳ್ಳಿರಿರೆಂದು ಸೂಚಿಸಿದಳು. ಮಾಣಿಯು ತನ್ನ ಮುಂದಿದ್ದ ದೃಶ್ಯವನ್ನು ನೋಡಿ ಚಕಿತನಾದನು. ಮಾತನಾಡಲು ಬಾರದು; ಅದು ಸಮಯವೂ ಅಲ್ಲ. ತುಂಟ ಮಗುವು ಅಪ್ಪನಿಗೆ ಹೆದರಿ ಅಮ್ಮನನ್ನು ಆಶ್ರಯಿಸಿ ಕುಳಿತುಕೊಳ್ಳುವಂತೆ ಅವನೀಶನ ಸಮೀಪದಲ್ಲಿ ಕುಳಿತನು. ಅವನೀಶನೊಮ್ಮೆ ಮಾಣಿಯ ಕಡೆ ತಿರುವಿ ನೋಡಿ ಅವನ ಅಂತಸ್ತಾಪವನ್ನು ಗ್ರಹಿಸಿ ಅರ್ಥಗರ್ಭಿತವಾಗಿ ನಕ್ಕು ಸಂಗೀತವನ್ನು ಕೇಳುತ್ತಾ ಕುಳಿತನು.

ಪಹಡಿ ಮುಗಿಯಿತು. ಗಾನ ಕೇಳುತ್ತಿದ್ದ ಒಬ್ಬ ರಸಿಕನು ಹತ್ತು ರೂಪಾಯಿನ ಒಂದು ನೋಟನ್ನು ಎಸೆದು

"ಒಂದು ಮಾಲ್‌ಕೋಸ ಅಪ್ಪಣೆಯಾಗಲಿ" ಎಂದು ಹೇಳಿದನು. ಗಾಯಕಳು ನಗುತ್ತಾ ಅವನನ್ನು ಉದ್ದೇಶಿಸಿ

"ಮಹಾರಾಜ್, ಇದು ಮಾಲ್‌ಕೋಸ್ ರಾಗವನ್ನು ಹಾಡುವ ವೇಳೆ

ಯಲ್ಲ. ಸಮಯಕ್ಕೊಪ್ಪುವ ಯಾವ ರಾಗವನ್ನು ಸೂಚಿಸಿದರೂ ಹಾಡು ವೆನು" ಎಂದು ತನ್ನ ಕಟಾಕ್ಷವೀಕ್ಷಣವನ್ನು ಅವನೀಶನ ಕಡೆ ಬೀರಿದಳು. ಅವನೀಶನು ನಗುತ್ತಾ

"ಹಾಗಾದರೆ ಬಾಗೇಶ್ರೀಯಾಗಲಿ" ಎಂದನು.

ಬಾಗೇಶ್ರೀ ರಾಗವಾರಂಭವಾಯಿತು. ಮಾಣಿಯ ಮನಸ್ಸಿನಲ್ಲಿ ಬಗೆಬಗೆಯ ಭಾವತರಂಗಗಳು ನಾಟ್ಯವಾಡಲಾರಂಭಿಸಿದವು. ಮೊದಲೇ ಮಧುರವಾದ ರಾಗಕ್ಕೆ ಮಧುರವಾದ ಕಂಠದ ಇಂಬು ದೊರೆತು ಅದು ಅಪೂರ್ವ ವೈಖರಿಯಿಂದ ರಂಜಿಸಲಾರಂಭಿಸಿತು. ಪ್ರೇಮದ ಕೋಮಲ ಅಂತರಂಗವು ಅವನೆದುರಿಗೆ ತೆರೆದಂತಾಯಿತು. ಈ ನಿವೇದನವು ತನ ಗಾಗಿಯೇ ಇರಬಹುದೇ? ಮಾತಿನಿಂದ ಹೇಳಲಾಗದುದನ್ನು ಪ್ರೇಮ ದಾಸಿಯು ಬಾಗೇಶ್ರೀಯಿಂದ ಸೂಚಿಸುತ್ತಿರಬಹುದೇ?... .......ಎಂದು ಯೋಚಿಸಿದನು. ಮರುಕ್ಷಣವೇ ಎದುರಿಗೆ ತನ್ನಂತೆಯೇ ಗಾನವನ್ನು ಕೇಳುತ್ತಾ ತಲೆದೂಗುತ್ತಿದ್ದವರ ಕಡೆಗೆ ಗಮನವು ಜಾರಿತು. "ಅವರೂ ನನ್ನ ಹಾಗೆಯೇ ಕನಸು ಕಾಣುತ್ತಿರಬಹುದೇನೋ" ಎಂದು ಸುಮ್ಮನಾದನು.

ಬಾಗೇಶ್ರೀಯಿಂದ ಅಸಾವೇರಿಯ ಕಡೆಗೆ ಪ್ರೇಮದಾಸಿಯ ಗ ನ್ರ ಹೊರಟಿತು. ಆ ರಾಗದಲ್ಲಿ ಮೂಡಿದ್ದ ದೈನ್ಯವು ಮಾಣಿಯ ಕರುಳನ್ನು ಚುಚ್ಚಿತು. "ಇಲ್ಲ, ನಾನು ಭಾವಿಸಿದ್ದು ತಪ್ಪು. ಇಷ್ಟು ಜನ ಇಷ್ಟು ಬಗೆಯಾಗಿ ಭಾವಿಸಿದರೂ ಪ್ರೇಮದಾಸಿಯೂ ನನಗಾಗಿಯೇ ಇವುಗಳನ್ನೆಲ್ಲಾ ಹಾಡುತ್ತಿರುವುದು. ಈ ಅಸಾವೇರಿಯ ಕಳಕಳಿಯ ಹೃದಯನಿವೇದನೆಯೂ ನನಗಾಗಿಯೇ" ಎಂದು ತಳಮಳಗೊಂಡನು.

ಮಾಣಿಯ ಜೀವನವು ಅಂದು ಒಂದು ವಿಶೇಷವಾದ ಅನುಭವಕ್ಕೆ ಒಳಗಾಯಿತು. ತನ್ನಲ್ಲಿ ಸುಪ್ತವಾಗಿದ್ದ ಯಾವದೋ ಚೇತನವು ನಿದ್ರೆ ಯಿಂದೆದ್ದ ಸಿಂಹದಂತೆ ಎದ್ದುದನ್ನು ಕಂಡನು. ಜೀವನವನ್ನು ಚಿತ್ರ ಕಲೆಯ ಮೂಲಕ ಕಂಡಿದ್ದ ಅವನಿಗೆ ಚಿತ್ರಕಲೆಯನ್ನು ಜೀವನದ ಮೂಲಕ ಕಾಣಬೇಕೆಂಬ ಆಶೆಯು ಆಗಲೇ ಉದಿಸಿತು. ಜ್ವರಸಂತಪ್ತನಂತೆ ಉದ್ವಿಗ್ನ ನಾದನು. ಮುಖವೆಲ್ಲಾ ಬೆವರಲಾರಂಭವಾಯಿತು. ತನ್ನ ಮನಸ್ಸಿನ ವಿಕ್ಷೋಭೆಯನ್ನು ಯಾರಿಗೂ ತೋರಗೊಡದಂತೆ ಯತ್ನಿಸುತ್ತಾ ಕುಳಿತನು.

ಅವನೀಶನ ಒಂದು ಕಣ್ಣು ತನ್ನ ಮೇಲೇಯೇ ಇದ್ದುದು ಮಾಣಿಗೆ ಗೊತ್ತಿಲ್ಲ. ಮಾಣಿಯ ಅಂತರಂಗದಲ್ಲಿ ನಡೆಯುತ್ತಿದ್ದ ಕದನವು ಬಹು ಸೂಕ್ಷ್ಮವಾಗಿ ಅವನೀಶನ ಮುಂದೆ ಚಿತ್ರಿತವಾಗುತ್ತಿತ್ತು. ಸರಳ ಹೃದಯದ ತನ್ನ ಮಿತ್ರನು ಹೇಗೆ ಜೀವನವನ್ನು ಕಂಡು ಅದರ ಮಹಾಸಮಸ್ಯೆಯನ್ನು ಎದುರಿಸಲಾರದೆ ತತ್ತರಿಸುತ್ತಿದ್ದಾನೆಂಬುದನ್ನು ನೋಡುತ್ತ ಅವನೀಶನು ಚಿಂತಾಪರವಶನಾದನು.

ಪ್ರೇಮದಾಸಿಯು ಹಿಂದೂಸ್ಥಾನಿ ಭೈರವಕ್ಕೆ ಬಂದಳು. ಭೈರವದ ಗಂಭೀರ ಝೇಂಕೃತಿಯು ಶ್ರೋತೃಗಳನ್ನು ಮುಗ್ಧರನ್ನಾಗಿ ಮಾಡಿತು. ಒಬ್ಬೊಬ್ಬರಾಗಿ ತಮ್ಮ ಟೋಪಿ ರುಮಾಲುಗಳನ್ನು ಧರಿಸಿ ಸರಿಪಡಿಸಿ ಕೊಳ್ಳುತ್ತ ಕುಳಿತರು. ರಾಗವು ಮುಗಿಯಿತು. ಶ್ರೋತೃಗಳು ಒಬ್ಬೊಬ್ಬರಾಗಿ ನಮಸ್ಕರಿಸಿ ತಮ್ಮ ಕಾಣಿಕೆಯನ್ನರ್ಪಿಸಿ ಹೊರಟರು. ಅವನೀಶನು ಮಾತ್ರ ಏಳುವ ಯಾವ ಚಿಹ್ನವೂ ಕಂಡುಬರಲಿಲ್ಲ. ಮಾಣಿಯೂ ಎಲ್ಲರಂತೆ ಟೋಪಿಯನ್ನು ಧರಿಸಿದ್ದನು. ಅವನೀಶನ ಆಲಸ್ಯವನ್ನು ಕಂಡು

"ಇನ್ನಾದರೂ ಹೋಗೋಣವೋ ಅವನೀ."

"ಎಲ್ಲಿಗೆ?"

"ನೀನು ನಿಮ್ಮ ಮನೆಗೆ– ನಾನು ಮೈಸೂರು ಗೆಳೆಯರಲ್ಲಿಗೆ."

"ಸರಿ. ಈಗ ಘಂಟೆ ಎಷ್ಟು ಗೊತ್ತೋ?"

"ಹನ್ನೊಂದೋ ಹನ್ನೆರಡೋ ಇರಬಹುದು."

"ಒಂದರ ಸಮಯ. ಭವಾನಿಪುರಕ್ಕೆ ಇಲ್ಲಿಂದ ಆರೇಳು ಮೈಲಿಗಳ ಮೇಲಾಗುತ್ತದೆ. ನೀನು ಹೇಗೆ ಹೋಗುವೆ."

"ಹಾಗಾದರೆ ಏನು ಮಾಡಲಿ?"

"ಇಲ್ಲೇ ಮಲಗು. ಬೆಳಿಗ್ಗೆ ಎದ್ದು ಹೋದರಾಯಿತು."

ಮಾರುತ್ತರ ಕೊಡಲಾರದೆ ಮೂಕನಂತೆ ಕುಳಿತನು. ಪ್ರೇಮ ದಾಸಿಯು ತನ್ನ ಮುಂದೆ ಬಿದ್ದಿದ್ದ ಹಣದ ರಾಶಿಯನ್ನು ಸಂಗ್ರಹಿಸಿ ಕೊಂಡು "ಈಗಲೇ ಬರುವೆ" ಎಂದು ವಿನಯದಿಂದ ಹೇಳಿ ತನ್ನ ತಂಗಿ ಯರೊಂದಿಗೆ ಒಳಗೆ ಹೋದಳು. ವಾದ್ಯಗಾರರೂ ಎದ್ದು ಹೋದರು. ಇದೇ ಸಮಯವನ್ನು ಕಾಯುತ್ತಿದ್ದ ಮಾಣಿಯು

“ ಇವರು ಯಾರು ಅವನೀ. ”

“ ಗೊತ್ತಾಗಲಿಲ್ಲವೇ ಮಂಕೂ. ನನ್ನ ನಲ್ಲೆಯರು. ”

“ ಅಂದರೆ.... ? ”

“ ಅಂದರೆ .... ” ಎಂದು ಎಡಗಣ್ಣನ್ನು ಅರ್ಥಗರ್ಭಿತವಾಗಿ ಮಿಟು ಕಿಸಿದನು. ಮಾಣಿಯ ಯೋಚನೆಯನ್ನು ಕಂಡು ಅವನೀಶನೇ

“ ಏನು ಹೇಳುತ್ತೀ ಮಾಣಿ. ಜೀವನವನ್ನು ನೋಡ ಬಯ ಸುವೆಯೋ ? ನನಗೆ ಪ್ರೇಮ .... ನಿನಗೆ .... ? ಈಗಲೇ ಹೇಳು. ”

“ ನೀನು ಎಲ್ಲವನ್ನೂ ಮೊದಲೇ ಸಂಚುಮಾಡಿರುವ ಹಾಗಿದೆ. ತುಂಟಾ .... ”

ಮುಂದೇನೋ ಹೇಳಬೇಕೆನ್ನುವಷ್ಟರಲ್ಲಿಯೇ ಸೇವಕನು ತಟ್ಟೆಯಲ್ಲಿ ಕೆಲವು ಹಣ್ಣುಗಳನ್ನು, ಇನ್ನೊಂದರಲ್ಲಿ ಟೀ ಸೆಟ್ಟನ್ನು ( Tea-Set ) ತಂದು ಮುಂದಿಟ್ಟನು. ಅವನೀಶನು ಗಂಭೀರವಾಗಿ ಕಿಸೆಯಿಂದ ಎಂಟಾಣೆಯ ನಾಣ್ಯವೊಂದನ್ನು ತೆಗೆದು ಅವನ ಮುಂದೆಸೆದು

“ ಬೇಗ ಬರಬೇಕೆಂದು ಬಾಯಿ – ಸಾಹೇಬಾ ಅವರಿಗೆ ಹೇಳು. ” ಎಂದು ಆಜ್ಞಾಪಿಸಲು ಸೇವಕನು ಸಲಾಮು ಹಾಕುತ್ತ ಹಿಂದೆರಳಿ ದನು. ಸ್ವಲ್ಪಹೊತ್ತು ಹಣ್ಣಿನ ಸೇವನೆಯಲ್ಲಿಯೇ ಕಾಲಕಳೆಯಿತು. ಅವ ನೀಶನು ಮತ್ತೆ ಕೆಣಕುವ ರೀತಿಯಲ್ಲಿ ನಗುತ್ತಾ

“ ಏನು ಮಾಣಿ. ನಿನ್ನ ಪಾತಿವ್ರತ್ಯಕ್ಕೆ ಭಂಗಬರುವುದೆಂದು ಚಿಂತಿ ಸುವೆಯೋ ? ”

“ ಗಂಡಸರಿಗೆ ಪಾತಿವ್ರತ್ಯವೆಂತಹುದೋ ? ಹುಚ್ಚನಂತೆ ಮಾತನಾಡು ವೆಯಲ್ಲಾ. ”

“ ಪಾತಿವ್ರತ್ಯ ಎಂದರೆ ಬ್ರಹ್ಮಚರ್ಯಕ್ಕೆ ದೀರ್ಘದಂಡ ನಮಸ್ಕಾರ ಅಂತಾ – ಅದಕ್ಕಾಗಿ ಯೋಚನೆಯೇನು ? ”

“ ಅದಕ್ಕಲ್ಲಾ ಯೋಚನೆ. ಏನೂ ಅನುಭವವಿಲ್ಲವಲ್ಲಾ ಎಂದು ಯೋಚನೆ. ”

“ ಹಾಗಾದರೆ ಧೈರ್ಯಮಾಡಿಕೋ. ಆ ಅನುಭವಕ್ಕೆ ಇದೇ ಯೂನಿ ವರ್ಸಿಟಿ. ನಿನಗೆ ಇವರು ಬೇಕಾದ ತಯಾರಿ ಕೊಡುತ್ತಾರೆ ” ಎಂದು

ಹೇಳುತ್ತಿರುವಂತೆ ಪ್ರೇಮದಾಸಿಯು ತನ್ನ ಒಬ್ಬ ತಂಗಿಯೊಂದಿಗೆ ಬಂದು ಕುಳಿತಳು. ಪರಸ್ಪರ ಪರಿಚಯುವಾಯಿತು. ಎಲ್ಲರೂ ಟೀ ಸೇವನೆ ಗಾರಂಭಿಸಿದರು. ಪ್ರೇಮದಾಸಿಯು ಮಾತಿನ ಮಧ್ಯೆ

“ ನೀವು ನನ್ನ ಮತ್ತು ನಮ್ಮ ರೂಪಳ ಭಾವಚಿತ್ರವನ್ನು ತೆಗೆದುಕೊಡಬೇಕು ” ಎಂದಳು.

“ ಹಾಗೆಯೇ ಆಗಲಿ. ನಿಮ್ಮ ತಂಗಿಯ ಹೆಸರು ರೂಪಳೆಂದೇನು? ’

“ ರೂಪದಾಸಿಯೆಂದು. ಏತಕ್ಕೆ ? ”

“ ಮನೋಹರವಾದ ಹೆಸರೆಂದು ಮೆಚ್ಚುತ್ತಿದ್ದೆ. ನೀವುಗಳು ದಾಸಿಯರೆಂದು ಏತಕ್ಕೆ ಕರೆದುಕೊಳ್ಳುವಿರಿ. ”

“ ನಾವು ವೈಷ್ಣವರು. ನಮ್ಮಲ್ಲಿ ಹಾಗೆ ಕರೆದುಕೊಳ್ಳುವುದೇ ಪದ್ಧತಿ ” ಎಂದು ಅವನೀಶನ ಕಡೆ ತಿರುಗಿದಳು. ಅವನು ಆಕಳಿಸುತ್ತ ಮೈಕೈಮುರಿಯುತ್ತ

“ ನನಗೆ ನಿದ್ದೆ ಬರುತ್ತಿದೆ. ಮಲಗೋಣವೇ ಮಾಣಿ ” ಎಂದು ಹೇಳುತ್ತಲೇ ಎದ್ದು ಪ್ರೇಮದಾಸಿಯೊಂದಿಗೆ ಒಳಗೆ ತೆರಳಿದನು. ಮಾಣಿಗೆ ದಿಕ್ಕೇ ತೋರದಂತಾಯಿತು. ತನ್ನೆದುರಿಗೆ ನಸುನಗುತ್ತಾ ಎದ್ದುನಿಂತ ರೂಪಳ ಕೈಹಿಡಿದು, ಅವಳನ್ನು ಹಿಂಬಾಲಿಸಿದನು.

ಆಳು ದೀಪಗಳನ್ನು ಆರಿಸಿ ಬಾಗಿಲು ಹಾಕಿ ಹಜಾರದಲ್ಲಿ ಮಲಗಿದನು.

ದೂರದಲ್ಲೆಲ್ಲೋ ಒಂದು ನಾಯಿ ಅತ್ತಂತೆ ಕೇಳಬಂತು. ಆಳು ಎದ್ದು ಹೊರಗೆ ಹೋಗಿ ಅದನ್ನು ಓಡಿಸಿ ಬಂದು ಮಲಗಿದನು.

---

## ೧೨

ಬೆಳಿಗ್ಗೆ ಮಾಣಿಯು ಎದ್ದಾಗ ಬೆಳಕು ಹರಿದು ಎಷ್ಟೋ ಹೊತ್ತಾಗಿತ್ತು. ಸುಪ್ಪತ್ತಿಗೆಯ ಮೇಲೆ ಕುಳಿತು ಕಿಟಕಿಯಾಚೆ ಕಿರಿಯೌವನದಿಂದ ಮೆರೆಯುತ್ತಿದ್ದ ಅರೆಯರಳಿದ ಗುಲಾಬಿಯ ಹೂವೊಂದನ್ನು ನೋಡುತ್ತ ಮೈಮರೆತನು. ಗಾಳಿಯ ವೇಗಕ್ಕೆ ಅದು ಸುತ್ತ ನಾಲ್ಕು ಕಡೆ ಹಾರಾಡಿದರೂ ತನ್ನ ಕಡೆ ತಿರುಗಿದಾಗ ಏನೋ ಹೇಳಲು ಪ್ರಯತ್ನಿಸು

ತ್ತಿದ್ದಂತಿತ್ತು. ತನ್ನ ಮನಸ್ಸಿನ ಭಾವನೆಯನ್ನು ತಿಳಿಸಲಾರದೆ ಅದು ಪೇಚಾಡುತ್ತಿದೆಯೋ – ಅದರ ಭಾವನೆಯನ್ನು ತಿಳಿಯಲಾಗದೆ ತಾನು ಪೆಚ್ಚಾಗಿದ್ದೇನೆಯೋ ಎಂದು ಮಾಣಿಯು ಯೋಚಿಸಲಾರಂಭಿಸಿದನು. ಇಂದು ಜಗತ್ತನ್ನೆಲ್ಲಾ ಅಪಹಾಸ್ಯಮಾಡಿಕೊಂಡು ನಗುತ್ತಿರುವ ಚೆಂಗುಲಾಬಿಯ ಗತಿಯು ನಾಳೆ ಏನಾಗುವುದು ? – ಆ ಚಿತ್ರ ಮಾಣಿಯ ಮನಸ್ಸಿನ ಮೇಲೆ ಮೂಡಿತು. ಗುಲಾಬಿಯ ಗತಿಯನ್ನು ಯೋಚಿಸುತ್ತ ಯೋಚಿಸುತ್ತಾ ಮಾಣಿಯ ಗಮನವು ತನ್ನ ಕಡೆಗೇ ತಿರುಗಿತು. ಹಿಂದಿನ ದಿನದ ಸಂಘಟನೆಗಳನ್ನೂ....ಅದರ ಹಿಂದಿನ ದಿನಗಳ ತನ್ನ ವಿದ್ಯಾರ್ಥಿದಶೆಯನ್ನೂ ಅದಕ್ಕೂ ಹಿಂದಿನ ದಿನಗಳ ತನ್ನ ದುಃಖಮಯ ಬಾಳನ್ನೂ ನೆನೆದನು. ಜೀವನರಥವನ್ನು ಮುಂದು ಮುಂದಕ್ಕೆ ಸಾಗಿಸಿಕೊಂಡು ಹೋಗಬೇಕೆಂದು ಮಾಡುತ್ತಿದ್ದ ತನ್ನ ಸಾಹಸವನ್ನು ತಡೆಗಟ್ಟಿ ಹಿಂದುಹಿಂದಕ್ಕೆ ತಳ್ಳುತ್ತಿದ್ದ ಮಹಾಶಕ್ತಿ ಯಾವುದೆಂದು ಚಿಂತಿಸಿದನು. ಬಗೆಹರಿಯದಾಯಿತು. ತನ್ನ ದೌರ್ಬಲ್ಯವು ಮೂರ್ತಿಮತ್ತಾಗಿ ಎದುರಿಗೆ ಬಂದು ನಿಂತಂತಾಯಿತು. ಕಣ್ಣುಗಳು ದುಃಖಬಿಂದುಗಳನ್ನು ಚೆಲ್ಲತೊಡಗಿದವು.

ಅವನೀಶನ ವಾಣಿ ಕೇಳಬಂತು. ಹಿಂದಿನಿಂದ ಅವನೇ ಬಂದು ಮಾಣಿಯ ಬಳಿ ಕುಳಿತು ರಾತ್ರಿಯ ಅನುಭವವೇನಾಯಿತೆಂದು ಕೇಳಿದನು. ತನ್ನ ಉಪಕಾರಕ್ಕೆ ಅವನು ನಿರೀಕ್ಷಿಸಿದ್ದುದು ಮಾಣಿಯ ಅನುಭವದ ಹಸಿಹಸಿ ಸುದ್ದಿ. ಆತುರನಾಗಿ ಮಾಣಿಯ ಮುಖವನ್ನು ನೋಡಿದನು. ಕಳೆಗುಂದಿ, ದುಃಖತುಂಬಿದ ನೀರಸಮುಖವು ಮಾಣಿಯದೇ ಎಂದು ನಂಬಲು ಪ್ರಯತ್ನಿಸಿದನು.

“ಏನು ಮಾಣಿ– ಬಹಳ ವ್ಯಸನಗೊಂಡಿರುವೆ, ಅನರ್ಥವೇನೂ....? ”

“ಏನೂ ಇಲ್ಲ ಅವನೀ. ಅನರ್ಥವೇನು ಬಂತು ? ಈಗ ಎಷ್ಟು ಘಂಟೆ ? ”

“ಒಂಭತ್ತು ಆಗಿರಬಹುದು. ”

“ಮಧ್ಯಾಹ್ನದ ಗಾಡಿಯಲ್ಲಿ ಶಾಂತಿನಿಕೇತನಕ್ಕೆ ಹಿಂದಿರುಗೋಣವೇ ? ”

“ಏಕೆ ! ಕಲ್ಕತ್ತೆ ಬೇಸರವಾಯಿತೇನು ? ”

" ಬೇಸರವಲ್ಲ. ಒಂದು ಬಗೆ 'ಮನೆಯ–ಕಾಹಿಲೆ' ಬಂದಂತಾಗಿದೆ. ನಂದಾಲಾಲರನ್ನು ನೋಡಬೇಕೆನಿಸಿದೆ."

" ಅದೆಲ್ಲಿ ಹೋಗುತ್ತದೆ ಮಾಣಿ. ರಜ ಮುಗಿದ ಮೇಲೆ ಇದ್ದೇ ಇದೆ. ಇನ್ನೇನು ರಜವೂ ಮುಗಿಯುತ್ತ ಬಂತಲ್ಲ. ನಾಳೆ ನಾಡಿದ್ದು ಬಿಟ್ಟು ಹೊರಡೋಣ."

" ಅಲ್ಲಿಯತನಕ ಏನು ಮಾಡುವುದು ? "

" ಏನು ಮಾಡುವುದೇ ? – ನಿನ್ನೆ ಏನೇನು ಮಾಡಿದೆವೋ ಅದನ್ನೇ ಮಾಡುವುದು. ನೀನು ಬಂಗಾಳಿ ನಾಟಕಗಳನ್ನು ನೋಡಬೇಕೆಂದೆಯಲ್ಲವೇ ? ಇಂದು ಬಹಾದೂರಿಯ ನಾಟಕಕ್ಕೆ ಹೋಗೋಣ. – ಪ್ರೇಮನೂ ಬರಬಹುದು – ಮತ್ತೆ – ನಿನ್ನ ಚಿತ್ರಗಳ ಮಾರಾಟವನ್ನು ಮರೆತೇ ಬಿಟ್ಟೆವಲ್ಲಾ. "

" ಎಲ್ಲಿ ಮಾರಿಸುತ್ತಿ ? "

" ನಿನಗೇತಕ್ಕೆ ಆ ತಾಪತ್ರಯ. 'ಮಧುಕರ' ಪತ್ರಿಕೆಯ ಸಂಪಾದಕ ಸುರೇಶಬಾಬು ನನ್ನ ಗೆಳೆಯ. ಅವನ ತಲೆಗೆ ಕಟ್ಟಿದರಾಯಿತು. ಆದರೆ ಚಿತ್ರಗಳನ್ನು ಭವಾನಿಪುರದಲ್ಲಿ ಬಿಟ್ಟಿರುವೆಯೇನೋ ?"

" ಹೌದು. "

" ಹಾಗಾದರೆ ನೀನೊಂದು ಕಾಗದ ಬರೆದುಕೊಡು. ಆಳಿನ ಕೈಲಿ ತರಿಸುವೆ. ಹಾಗೆಯೇ ನಿನ್ನ ಹಾಸಿಗೆ ಸಾಮಾನುಗಳನ್ನೂ ಕಳುಹಿಸಿರೆಂದು ಬರೆ. "

" ಆದರೆ . . . "

" ಅದಕ್ಕೇನು ? ಹೋಗುವ ಮುನ್ನ ಒಮ್ಮೆ ನೋಡಿ ಹೋದರಾಯಿತು. "

ಅವನೀಶನ ಇಚ್ಛೆಯಂತೆ ಕಾಗದವನ್ನು ಬರೆದಿತ್ತು ಸೇವಕನು ತಂದಿತ್ತ ಚಹಾವನ್ನು ಸವಿಯುತ್ತ ಕುಳಿತನು. ಏಕಾಂಗಿಯಾಗಿ ತಾನಿದ್ದಾಗ ಬಂದ ಭಾವನೆಗಳೂ, ಮಾಡಿದ ನಿರ್ಧಾರಗಳೂ ಅವನೀಶನ ಮುಂದೆ ಏನಾಗುತ್ತವೆ ? ಎಂದು ಯೋಚನೆ ಹೊಳೆಯಿತು. ಅವನ ಮುಂದೆ ತಾನು ಎಷ್ಟು

ಸಣ್ಣವನಾಗಿ ಬಿಡುವೆ! ತನ್ನ ವ್ಯಕ್ತಿತ್ವವು ಅವನ ಸುಣುಪು ಮಾತುಗಳಲ್ಲಿ ಹೇಗೆ ಜಾರಿ ಹೋಗಿ ಬಿಡುತ್ತದೆ ಎಂದು ಚಿಂತಿಸಿದನು.

ರೂಪಳು ಬಂದು ಮಾಣಿಯ ಕೈಯಲ್ಲಿದ್ದ ಟೀ ಪಾತ್ರೆಯನ್ನು ತೆಗೆದು ಕೊಂಡು ಕೆಳಗಿಟ್ಟಳು. ಅವಳ ಬರವನ್ನು ಕಂಡು ಅರಳಿದ ಮುಖವು ಅವಳು ಸಮೀಪಕ್ಕೆ ಬಂದು ಪಕ್ಕದಲ್ಲಿ ಕುಳಿತುಕೊಳ್ಳಲು ಹಾಗೆಯೇ ಮುದುಡಿಕೊಂಡಿತು. ರೂಪಳೇ ಮಾಣಿಯ ಕುತ್ತಿಗೆಯ ಮೇಲೆ ಕೈ ಹಾಕಿ ಅವನ ಕೈಯನ್ನೆತ್ತಿ ತನ್ನ ಕೊರಳ ಮೇಲೆ ಹಾಕಿಕೊಂಡಳು. ಅವಳ ಪ್ರೇಮಚೇಷ್ಟೆಗಳಿಗೆ ಒಲಿದವನಂತೆ ತೋರುತ್ತಾ ಮಧ್ಯೆ ಮಧ್ಯೆ ಇಣಿಕಿಣಿಕಿ ಅವಳು ಮುಖವನ್ನು ನೋಡಿದನು.

ನಿನ್ನೆ ನೋಡಿದ ಆ ಮಿಂಚಿನಂತಹ ಕಣ್ಣುಗಳೆಲ್ಲಿ? – ಸಂಪಿಗೆ ಯಂತಹ ನಾಸಿಕವೆಲ್ಲಿ? – ಚಂದ್ರೋದಯದಂತಹ ಮುಗುಳ್ನಗೆಯೆಲ್ಲಿ? - ದೇಹದ ಕುಸುಮಕೋಮಲತೆಯೆಲ್ಲಿ? – ಮಲ್ಲಿಗೆಯ ಎಳೆಬಳ್ಳಿಯಂತಹ ಬಳುಕಾಟವೆಲ್ಲಿ? – ಹಾಲಿನ ಕೆನೆಯಂತಹ ಮೈಕಾಂತಿಯೆಲ್ಲಿ? – ಎಲ್ಲಿ? – ಎಲ್ಲಿ? – ಎಲ್ಲಿ??? ಮನಸ್ಸಿನಲ್ಲಿ ದುಗುಡವೇರುತ್ತ ಬಂದಿತು. ಎಷ್ಟು ನಿರೀಕ್ಷಿಸಿದರೂ ಪ್ರಶ್ನೆಗುತ್ತರವಿಲ್ಲ. ಅದಕ್ಕೆ ಬದಲು ಮಾಣಿಯ ಕನಸನ್ನು ಅಣಕಿಸುವಂತೆ ಆಶೆಯನ್ನು ಮುರಿಯುವಂತೆ ರೂಪಳ ಒಡೆದ ಮಡಿಕೆ ಯಂತಹ ದೇಹ. ವಿಕಾರವನ್ನು ಮುಚ್ಚಲು ಮಾಡಿದ್ದ ವಿಚಿತ್ರವಿನ್ಯಾಸ. ಗ್ರಹಣ ಹಿಡಿದ ಚಂದ್ರನನ್ನು ಹೋಲುತ್ತಿದ್ದ ಕಾಂತಿಹೀನವಾದ ಕಂಗಳು; ಮುದಿತನ ಕಾಣಲು ವಯಸ್ಸೇ ಆಗಬೇಕೆಂಬ ಸಿದ್ಧಾಂತವನ್ನು ಪ್ರತಿಭಟಿ ಸುತ್ತಿದ್ದ ಸುಕ್ಕುಸುಕ್ಕಾದ ಮುಖ. ಒಣಗಿದ ಕಾಷ್ಠದಂತಿದ್ದ ಕೈಕಾಲು ಗಳು. – ಏರಿಳಿತಗಳನ್ನು ಅರಿಯದ ದೇಹದ ಭಾವವನ್ನು ನೋಡುತ್ತಾ ನೋಡುತ್ತಾ ನಿನ್ನಿನ ರಾತ್ರಿ ತನಗೆ ಕಾಮಶಾಸ್ತ್ರವನ್ನುಪದೇಶಿಸಿದ ಗುರುವು ಇವಳೇನೋ ಬೇರೆಯೋ ಎಂದು ಯೋಚಿಸಲಾರಂಭಿಸಿದನು.

ತನ್ನ ಮಾತಿಗುತ್ತರ ಕೊಡದೆ ಮೂಕನಂತೆ ನೋಡುತ್ತ ಕುಳಿತಿದ್ದ ಮಾಣಿಯ ಮುದ್ರೆಯನ್ನು ನೋಡಿ ರೂಪಳಿಗೆ ಬಹಳ ನಗೆ ಬಂತು. ಅವ ನನ್ನು ನೋಡಿ ಒಮ್ಮೆ ಅಣಕಿಸಿದಳು. ಮಾಣಿಗೂ ನಗೆ ಬಂತು. ಸುಮ್ಮ

ನಿದ್ದರೇ ಅಣಕಿಸುತ್ತಿದ್ದಂತೆ ಕಾಣುತ್ತಿದ್ದ ಮುಖದ ಮೇಲೆ ಅಣಕವೂ ತೇಲುವದಲ್ಲಾ ಎಂಬ ಆಶ್ಚರ್ಯದಿಂದ ನಕ್ಕನು. ಹಾಗೆಯೇ

"ಏನು ಬಂದಿರಿ?"

"ಏಕೆ! ಬರಬಾರದೇನು?"

"ಬರಬಾರದು ಎಂದೆನೇನು? ಈಗೇನು ಬಂದಿರಿ ಎಂದು ಕೇಳಿದೆ."

"ನಾವೇನು ಹಾಗಾದರೆ ಯಾವಾಗಲೂ ರಾತ್ರಿಗೇ ಬರಬೇಕೇನು?"

ಮಾಣಿಗೀಗ ನಿಜವಾಗಿಯೂ ನಗೆಬಂತು. ಸರಳವಾಗಿ ರೂಪಳ ಬಾಯಲ್ಲಿ ಬಂದ ಮಾತಿನಲ್ಲಿ ಎಷ್ಟು ಸತ್ಯವಿದೆಯೆಂದು ಚಕಿತನಾದನು. ಮೊದಲಿನ ಬಿರುಸನ್ನು ಕಡಿಮೆ ಮಾಡಿ ಮಾರ್ದವದಿಂದ ಅವಳನ್ನು ನೇವರಿಸಿದನು. ರೂಪಳ ಮುಖದಲ್ಲಿ ಮಿಂಚು ಸುಳಿದಂತಾಯಿತು. ಅಂತಃಕರಣದಿಂದ ಕೂಡಿದ ಅನುರಾಗದ ಮಹಿಮೆಯನ್ನು ಆ ಕ್ಷಣಾರ್ಧದಲ್ಲಿ ಗ್ರಹಿಸಿದನು. ಮಿಂಚಿನ ಹೊಡೆತದಿಂದ ಚೇತರಿಸಿಕೊಂಡು ರೂಪಳು "ಸ್ನಾನಕ್ಕೆ ಸಿದ್ಧವಾಗಿದೆಯೆಂದು ತಿಳಿಸಲು ಬಂದೆ" ಎಂದು ಕೈಗೊಂದು ಟವಲನ್ನಿತ್ತು ಮಾಣಿಯನ್ನೆಬ್ಬಿಸಿ ಬಚ್ಚಲುಮನೆಗೆ ಕಳುಹಿಸಿದಳು.

ಸೇವಕನು ಮಾಣಿಯ ಸಾಮಾನುಗಳನ್ನು ತಂದು ರೂಪಳ ಕೋಣೆಯಲ್ಲಿಳುಹಿದನು. ಅವುಗಳ ಜೊತೆಯಲ್ಲಿದ್ದ ಕಾಗದದ ಕಟ್ಟನ್ನು ಬಿಚ್ಚಿ ಚಿತ್ರಗಳನ್ನೊಂದೊಂದಾಗಿ ನೋಡುತ್ತಾ ಕುಳಿತಳು. ಒಂದೊಂದು ಚಿತ್ರವನ್ನು ನೋಡುತ್ತಾ ಅವಳ ಹೃದಯವು ಹೆಮ್ಮೆಯಿಂದ ಉಬ್ಬುತ್ತಿತ್ತು. ಆ ಸೂರ್ಯಾಸ್ತಗಳು, ಸೂರ್ಯೋದಯಗಳು, ಆ ಸರಳವಾದ ಸಂತಾಲೀ ಜನರ ಜೀವನಚಿತ್ರಗಳನ್ನು ತಿರುವಿ ಹಾಕಿ ಓಂಕಾರದ ಮುಂದೆ ಮುರಲೀ ಮಗ್ನನಾಗಿ ನಿಂತಿದ್ದ "ಶ್ಯಾಮಸುಂದರ" ಚಿತ್ರವನ್ನು ನೋಡುತ್ತಾ ಕುಳಿತಳು. ಗತಿಯನ್ನು ಗಮನಿಸದೆ ಹುಚ್ಚು ಹಟಮಾರಿತನದಿಂದ ಹೊರಡುವ ನದಿಯ ವೇಗದಲ್ಲಿ ಕಣ್ಣುಗಳಿಂದ ಹನಿಗಳು ಹೊರಟವು. ಹೆಮ್ಮೆಯಿಂದ, ಆನಂದದಿಂದ, ಔನ್ನತ್ಯದಿಂದ ಅವಳ ಮನಸೊಮ್ಮೆ ಹಿಗ್ಗಿದರೆ ಮರುಕ್ಷಣವೇ ಅಪಾರವಾದ ದುಃಖದಿಂದ, ದುಗುಡದಿಂದ ಕೂಡಿದ ದುಮ್ಮಾನದಿಂದ ಕುಗ್ಗುವುದು. "ಶ್ಯಾಮಸುಂದರ"ನ ಬದಲು ಓಂಕಾರದ ಹೃದಯಸ್ಥಳದಲ್ಲಿ ಮಾಣಿಯೇ ನಿಂತಂತೆ ಅವಳಿಗೆ ಭಾಸವಾಗುತ್ತಿತ್ತು.

ಮಾಣಿಯು ಸ್ನಾನವನ್ನು ತೀರಿಸಿಕೊಂಡು ಬಂದದ್ದೂ ಅವಳಿಗೆ ಗೊತ್ತೇ ಇಲ್ಲ. ಅವನೇ ಮೆಲ್ಲನೆ ಹಿಂದಿನಿಂದ ಬಂದು ಮೃದುವಾಗಿ "ಪ್ಯಾರೀ—ರೂಪರಾಣಿ" ಎಂದನು. ಬೆಚ್ಚಿ ಹಿಂದಿರುಗಿ ನೋಡಿ ಎದ್ದು ನಿಂತಳು. ಮಾಣಿಯನ್ನು ಮೆಲ್ಲನೆ ಹಾಸಿಗೆಯ ಮೇಲೆ ಕುಳ್ಳಿರಿಸಿ ತಾನು ಅವನ ಕಾಲಬಳಿ ಕುಳಿತಳು. ನೀರವತೆಯ ನಿರ್ಬಾಧಿತ ಅಧಿಕಾರವು ಸ್ವಲ್ಪ ಹೊತ್ತು ನಡೆಯಿತು. ಅನಂತರ ಮಾಣಿಯ ಪಾದದ ಮೇಲೆ ಒಂದು ಬಿಸಿಯಾದ ಹನಿ ಬಿದ್ದಂತಾಯಿತು. ಮೆಲ್ಲನೆ ರೂಪಳ ಕತ್ತೆತ್ತಿ ನೋಡಿದನು. ದುಃಖದ ಮುಖವು ಮುದುಡಿ ಹೋಗಿತ್ತು. ಮಾನವಸಹಜವಾದ ಅನುತಾಪದಿಂದ ಅವಳ ಕೈ ಹಿಡಿದು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ತಲೆಯನ್ನು ನೇವರಿಸಿ ಮುದ್ದಿಸಿದನು.

"ಪ್ಯಾರೀ, ಏತಕ್ಕೆ ಈ ಕಂಬನಿಯ ಕಾಲುವೆ? ದುಃಖದ ಕಾರಣವನ್ನು ಹೇಳು."

ರೂಪಳಿಗೆ ದುಃಖವು ಉಕ್ಕಿ ಬಂದಿತು. ಕಂಠವು ಗದ್ಗದವಾಗಿ ಮಾತು ಹೊರಡದಂತಾಯಿತು. ಮಾಣಿಯು ಅನುನಯದ ನುಡಿಗಳಿಂದ ಸಂತೈಸಿ ಮತ್ತೆ ಮತ್ತೆ ದುಃಖದ ಕಾರಣವನ್ನು ಕೇಳಿದನು. ರೂಪಳು ಕತ್ತೆತ್ತಿ ನೋಡಿ, ಮಾಣಿಯ ಮುಖವನ್ನು ಕೈಯಲ್ಲಿ ಹಿಡಿದು ಮತ್ತೆ ಮತ್ತೆ ಮುದ್ದಿಸಿ ಅವನ ಭುಜದ ಮೇಲೊರಗಿ ತನ್ನ ಅಂತಸ್ತಾಪದ ಮಹಾದ್ವಾರಗಳನ್ನು ತೆರೆದು ಬಿಟ್ಟಳು. ಮಾಣಿಗೆ ಈ ಸಮಸ್ಯೆಯು ಬಹಳ ಸೋಜಿಗವನ್ನುಂಟುಮಾಡಿತು. ಎದುರಿಗೆ ಹರಡಿ ಬಿದ್ದಿದ್ದ ತನ್ನ ಚಿತ್ರಗಳನ್ನು ನೋಡಿ 'ಇವುಗಳಿಗೂ ರೂಪಳ ದುಃಖಕ್ಕೂ ಏನಾದರೂ ಸಂಬಂಧವಿರಬಹುದೇ' ಎಂದು ಯೋಚಿಸಿದನು. ಮತ್ತೊಮ್ಮೆ

"ಹೇಳು ರೂಪಾ, ಏಕಿಷ್ಟು ಚಿಂತೆ?"

ರೂಪಳು ತನ್ನ ದುಃಖವನ್ನು ಅಡಗಿಸಿಕೊಂಡು

"ನಾನು ಮಹಾಪರಾಧಿ ಬಾಬುಜೀ. ನೀವು ಮಹಾನುಭಾವರು."

"ಹಾಗೆಂದರೇನು ರೂಪಾ?"

"ನಿಮ್ಮ ಪವಿತ್ರ ದೇಹವನ್ನು ಮುಟ್ಟುವ ಅಧಿಕಾರ ನನಗಿಲ್ಲ. ಆದರೆ ಮುಟ್ಟಿದೆ—ಕೆಡಿಸಿದೆ."

“ ಛೆ! ಏನು ಮಾತು! ಕೆಡಿಸುವವರು ಯಾರು, ಕೆಡುವವರು ಯಾರು! ನೀನು ಹಾಗೆ ಮಾತನಾಡಿದರೆ ಯಾರಾದರೂ ಹುಚ್ಚಿ ಎಂದು ನಕ್ಕಾರು.”

“ ನಗಲಿ ಬಾಬೂಜೀ. ನಾನು ನಿಜವಾಗಿಯೂ ಹುಚ್ಚಿಯೇ ಆಗಿದ್ದೇನೆ. ನೀವು ಮಾಡಿರುವ ಭಗವಾನ್ ಕನ್ಹಯ್ಯಾನ ಚಿತ್ರವನ್ನು ನೋಡಿ ನಾನು ನಿಜವಾಗಿಯೂ ಹುಚ್ಚಳಾಗಿದ್ದೇನೆ. ನಿಮ್ಮ ದೇಹದ ಮೇಲೆ ನನ್ನ ಪತಿತ ಜೀವನದ ಸೋಂಕನ್ನು ಹರಡಬಾರದಿತ್ತು. ಆದರೆ ವಿಧಿಯಿಲ್ಲ.... ಕೈಮೀರಿತು.”

“ ವಿಷಾದವೇತಕ್ಕೆ ರೂಪಾ. ನೀನಲ್ಲದಿದ್ದರೆ ನಿನ್ನ ಕೆಲಸವನ್ನು ಬೇರೆ ಯಾರಾದರೂ ಮಾಡುತ್ತಿದ್ದರು. ಇಂದಲ್ಲದಿದ್ದರೆ ನಾಳೆ. ಅದಕ್ಕೆ ಇಷ್ಟು ದುಃಖವೇ ? ”

“ ಹಾಗಲ್ಲಾ ಮಹಾಶಯ. ‘ ಶ್ಯಾಮಸುಂದರ ’ ಚಿತ್ರವನ್ನು ಬರೆಯುವ ಯೋಗ್ಯತೆಯು ಕೆಟ್ಟ ಬಾಳಿನಿಂದ ಕುಂದಬಾರದು ಎಂಬುದೇ ನನ್ನ ಆಶೆ. ನೀವು ದೊಡ್ಡವರಾಗಿ ಇಂತಹದೇ ಅನೇಕ ಉತ್ಕೃಷ್ಟ ಕೃತಿಗಳನ್ನು ಮಾಡಬೇಕು. —ದಾಸಿಯ ಮಾತನ್ನು ಕ್ಷಮಿಸಬೇಕು. ಒಂದು ಪ್ರಾರ್ಥನೆ ಇದೆ.”

“ ಹೇಳು ರೂಪ–ರಾಣಿ. ”

“ ನನಗೆ.... ‘ ಶ್ಯಾಮಸುಂದರ ’ನ ಭಿಕ್ಷವನ್ನು ನೀಡಬೇಕು. ಮತ್ತು ಕಲ್ಕತ್ತೆಗೆ ಬಂದಾಗ ಒಮ್ಮೆಯಾದರೂ ಇತ್ತ ಬಂದು ದರ್ಶನವನ್ನು ಕೊಡಬೇಕು. ”

ವಾಣಿಯ ಕಣ್ಣುಗಳಲ್ಲಿಯೂ ನೀರೂರಿತು. ‘ ಶ್ಯಾಮಸುಂದರ ’ ನನ್ನೆತ್ತಿ ಅದರ ಹಿಂದೆ ರೂಪಳ ಹೆಸರು ಬರೆದು ಮನಃಪೂರ್ವಕವಾಗಿ ಚಿತ್ರವನ್ನಿತ್ತನು. ರೂಪಳದನ್ನು ಎದೆಗೆ ಅಪ್ಪಿಕೊಂಡು ಮಾತಿನ ಮೇರೆ ಮೀರಿದ ಕೃತಜ್ಞತೆಯನ್ನು ಕಣ್ಣಿನಿಂದಲೇ ಸೂಚಿಸಿದಳು. ವಾಣಿಯು ಆದರದಿಂದ ರೂಪಳನ್ನಪ್ಪಿ ಶುದ್ಧವಾದ ಪ್ರೇಮದಿಂದ ಅವಳನ್ನು ಚುಂಬಿಸಿದನು.

ಅವನೀಶನ ವಾಣಿಯು ಕೇಳಿಸಲು ಅವಸರದಿಂದ ರೂಪಳನ್ನಗಲಿ ಚಿತ್ರಗಳನ್ನು ಸಂಗ್ರಹಿಸಿಕೊಂಡು ವೇಷಭೂಷಿತನಾಗಿ ಅವನೊಂದಿಗೆ ಹೊರಡಲು ಸಿದ್ಧನಾದನು.

---

೧೩

" ಆನಂದ " ಪತ್ರಿಕೆಯ ಕಾರ್ಯಾಲಯದಲ್ಲಿ ಸಣ್ಣ ಸಭೆಯೊಂದು ಸೇರಿತು. ಸಂಪಾದಕ ಮುಕುಂದರಾಯರೇ ಅಧ್ಯಕ್ಷರು. ಮೂರ್ತಿ ರಮೇಶರೇ ವಾದಿ ಪ್ರತಿವಾದಿಗಳು. ಪ್ರತಿತಿಂಗಳೂ " ಆನಂದ " ಪತ್ರಿಕೆ ಯಲ್ಲಿ ಪ್ರಕಟವಾಗುವ ಮುಖಚಿತ್ರಗಳನ್ನು ಆರಿಸುವ ಕಾರ್ಯಭಾರವು ಮೂರ್ತಿ ರಮೇಶರನ್ನು ಸೇರಿದುದಾಗಿತ್ತು. ಆ ತಿಂಗಳು ಠಾಕೂರಸಿಂಗನ " ಅಲಂಕಾರ " ಚಿತ್ರವನ್ನು ಮುಖಚಿತ್ರವಾಗಿ ಪ್ರಕಟಿಸಬೇಕೆಂದು ರಮೇಶನ ಹಟ. " ಇತ್ತೀಚೆಗೆ ' ಆನಂದ ' ದ ತುಂಬಾ ಮುಜಂದಾರ್, ಠಾಕೂರಸಿಂಗರೇ ಆಗಿದ್ದಾರೆ. ಸದ್ಯಕ್ಕೆ ಆ ಸಂಪ್ರದಾಯದ ಚಿತ್ರಗಳು ಸಾಕು. ಈಚೆಗೆ ' ಮಧುಕರ ' ವೆಂಬ ಬಂಗಾಳೀ ಪತ್ರಿಕೆಯಲ್ಲಿ ಪ್ರಕಟ ವಾಗಿರುವ ' ಭ್ರಮರಗೀತ ' ಎಂಬ ಚಿತ್ರವನ್ನು ಹಾಕಲೇ ಬೇಕೆಂ"ದು ಮೂರ್ತಿಯ ಕೋರಿ. ಈ ಮಧ್ಯೆ ಯಾರನ್ನು ನೋಯಿಸುವುದು, ಯಾರನ್ನು ಮೆಚ್ಚಿಸುವುದು ಎಂದು ರಾಯರು ಚಿಂತಾಕುಲರಾದರು.

ಮೂರ್ತಿಗೂ ರಮೇಶನಿಗೂ ಆಗಾಗ್ಗೆ ಯಾವದಾದರೊಂದು ಕಾರಣಕ್ಕೆ ಜಗಳವಾಗುತ್ತಲೇ ಇತ್ತು. ಕಲೆಯ ವಿಚಾರ ಬಂದು ಬಿಟ್ಟರಂತೂ ಇಬ್ಬರೂ ಮೈಮರೆತು ಬಿಡುತ್ತಿದ್ದರು. " ಭ್ರಮರಗೀತ "ದಲ್ಲಿ ಅರ್ಥ ಸಾಮರಸ್ಯವಿಲ್ಲವೆಂದು ರಮೇಶನ ಆಕ್ಷೇಪ; " ಅಲಂಕಾರ "ದಲ್ಲಿ ಅರ್ಥವೇ ಇಲ್ಲವೆಂದು ಮೂರ್ತಿಯ ಅಭಿಪ್ರಾಯ. ಮೃದುವಾಗಿ ಆರಂಭವಾದ ಮಾತು ಕ್ರಮಕ್ರಮೇಣ ಹದ್ದು ಮೀರುತ್ತ ಬಂತು.

" ನಿನಗೆ ಈ ಬಂಗಾಳಿ ಸಂಪ್ರದಾಯದ ಪ್ರೇಮ ದೊಡ್ಡ ಕಾಹಿಲೆ ಯಾಗುತ್ತಿದೆ ಮೂರ್ತಿ. "

" ಹೌದು, ಅಭಿರುಚಿಯ ದಾರಿದ್ರ್ಯವೆಂಬ ಕಾಹಿಲೆಯಿಂದ ನರಳುವು ದಕ್ಕಿಂತಲೂ ಉತ್ತಮ ಅಭಿರುಚಿಯಿಂದ ನರಳುವುದೇ ಲೇಸು ರಮೇಶ್."

" ಎಂತಹ ಅಭಿರುಚಿ. ಯಾರೋ ನಾಲ್ಕು ಜನ ಅದು ಉತ್ತಮ ಸಂಪ್ರದಾಯವೆಂದು ಹಾಡಿದರೆ ನೀನೂ ಹುಚ್ಚನಂತೆ ತಾಳ ಹಾಕು."

" ಸರಿ. ಆದರೆ ನಾಲ್ಕು ಜನ ನಿನ್ನ ಸಂಪ್ರದಾಯವನ್ನೇ ಉತ್ತಮ ವೆಂದೇತಕ್ಕೆ ಹಾಡುವುದಿಲ್ಲ. "

"ಆ ನಾಲ್ಕು ಜನ ಹಾಡದಿದ್ದರೇನು, ಇಡೀ ಲೋಕವೇ ಹಾಡುತ್ತದೆ."

"ನಾಲ್ಕು ಜನದ ಹಾಡಿಗೆ ತಾಳ ಹಾಕುವ ಹುಚ್ಚ ನಾನು; ಇಡೀ ಲೋಕದ ಹಾಡಿಗೆ ತಾಳ ಹಾಕುವ ಹುಚ್ಚ ನೀನು – ಅಲ್ಲವೇ ರಮೇಶ್. ಕಲಾವಿದನು ಕ್ರಿಯಾಶಾಲಿ ಯಾವಾಗ ಆಗುವುದಿಲ್ಲವೋ ಆಗ ನಾಚುಬಾಲಿಕೆಯರ ಹಾದಿ ಹಿಡಿಯುತ್ತಾನೆ."

"ಇದು ತಲೆಹರಟೆ ಮಾತು ಮೂರ್ತಿ. ನಾಲ್ಕು ಪುಸ್ತಕಗಳನ್ನು ಓದಿದ್ದೇನೆಂಬ ಹಮ್ಮಿನಿಂದ ನೀನು ಬಹಳ ದುರಹಂಕಾರದ ಮಾತುಗಳನ್ನಾಡುತ್ತಿರುವೆ. ಸರಿಯಾಗಿ ಒಂದು ಕುಂಚವನ್ನು ಹಿಡಿಯುವುದಕ್ಕೆ ಬರುವುದಿಲ್ಲ. ನೀನೊಬ್ಬ ಕಲಾವಿಮರ್ಶಕ – ದೊಡ್ಡ ಕಲಾವಿದ."

"ಒಪ್ಪಿದೆ ರಮೇಶ್. ಕುಂಚವನ್ನು ಹಿಡಿದು ನೀನು ಏನೇನು ಮಹತ್ಕಾರ್ಯಗಳನ್ನು ಮಾಡಿರುವೆ. ರ್‍ಯಾಫೇಲನ 'ಮ್ಯಾಡೋನ ಮತ್ತು ಮಗು' ವನ್ನು ಕದ್ದು 'ಯಶೋದಾಕೃಷ್ಣ' ರಚಿಸಿದೆ. ವೆಂಕಟಪ್ಪನವರ 'ಅರ್ಧನಾರೀಶ್ವರ'ನನ್ನು ಕದ್ದು 'ಹರಿಹರೇಶ್ವರ'ನನ್ನು ರಚಿಸಿದೆ. ರನೋದಚರಣ ಉಕೀಲರ 'ಮಹಾಕಾಳಿ'ಯನ್ನು ಕದ್ದು 'ದುರ್ಗಾಮಾತೆ'ಯನ್ನು ರಚಿಸಿದೆ.— ಇನ್ನೂ ಹೇಳಲೋ ನಿನ್ನ ಕಲಾವೈಭವವನ್ನು. ಇವೆಲ್ಲಕ್ಕೂ ಕಳಸವಿಟ್ಟಂತೆ ಮಾಣಿಯ ಮೇಲಣ ಈರ್ಷ್ಯೆಯಿಂದ ಅವನ 'ಸಂದೇಶ' ಚಿತ್ರವನ್ನು ಸುಟ್ಟಿದ್ದು. ನೀನು ಕಲಾವಿದ – ನಿನ್ನ ಅಂತರಂಗ ಕಲೆಯ ತೌರೂರು – ನೀನು ಕಲಾಚಾರ್ಯ."

"ಸಾಕು ನಿಲ್ಲಿಸು ಮೂರ್ತಿ. ನಾನು.... ನಾನು...."

"ಭ್ರಮರಗೀತದಲ್ಲಿ ಮಾಣಿಯಂತಹದೇ ಕೈವಾಡವಿದೆ. — ಇದು ಅವನದೇ ಇರಬಹುದೋ ಎಂಬ ಸಂಶಯವನ್ನು ನಾನು ವ್ಯಕ್ತಗೊಳಿಸಿದ್ದಕ್ಕೆ ಅದರ ಮೇಲೂ ನಿನ್ನ ಆಗ್ರಹ."

"ನಿನ್ನದು ತಪ್ಪು ಆವಾದನೆ ಮೂರ್ತಿ....ತಪ್ಪು..."

"ಹೌದು. ಅವನಿರುವ ತನಕ ಕಾಡಿ ನಿನ್ನ ಸಂಪಾದನೆಗೆ ಅವನ ಕಲೆಯನ್ನು ಅಧೀನ ಮಾಡಲೆತ್ನಿಸಿದೆ. ಆದರದಕ್ಕೆ ಅವನು ಬಗ್ಗದಿರಲು ಈ ಬಗೆಯ ಹೀನ ವೈಷಮ್ಯವನ್ನು ತಾಳಿದೆ. ನಿನ್ನಂತೆ ಕಲಾವಿದರಾಗುವುದ

ಕ್ಕಿಂತಲೂ ನನ್ನಂತೆ ಉತ್ತಮ ಕಲೆಯ ಯೋಗ್ಯತೆಯನ್ನು ಗ್ರಹಿಸಿ ಮೆಚಿ ಸಂತೋಷಿಸುವ ಶಕ್ತಿಯನ್ನು ಸಂಪಾದಿಸುವುದೆಷ್ಟೋ ಲೇಸು."

ಒಂದೊಂದು ಮಾತು ಒಂದೊಂದು ಚಾಟಿಯ ಪೆಟ್ಟಿನಂತೆ ರಮೇಶನ ಮೇಲೆ ಬೀಳಲಾರಂಭಿಸಿದವು. ಅವನ ತೇಜೋಭಂಗವನ್ನು ನೋಡಿ ರಾಯರಿಗೆ ತುಂಬ ವಿಷಾದವಾಯಿತು. ಇನ್ನು ಈ ವಾದವನ್ನು ಬೆಳೆಯಗೊಡಬಾರದೆಂದು ಮಧ್ಯೆ ಬಾಯಿ ಹಾಕಿ

"ನಿನಗೆ ಕೋಪ ಬಂದರೆ ಶುದ್ಧ ರಾಕ್ಷಸನಾಗಿ ಬಿಡುತ್ತೀ ಮೂರ್ತಿ. ಪೂರ್ವಾಪರವೆಲ್ಲಾ ಮರೆತು ಹೋಗುತ್ತದೆ. ನಾವು ಹೇಗೆ ಮಾಣಿಯ ವಿಚಾರದಲ್ಲಿ ಆದರವುಳ್ಳವರಾಗಿದ್ದೆವೋ ಹಾಗೆಯೇ ರಮೇಶನೂ ಇದ್ದುದನ್ನು ಮರೆತೆಯೇನು ? ಇವತ್ತು ಮಾಣಿಯ ಅಭ್ಯುದಯಕ್ಕೆ ನೀನು ನಾನು ಮಾಡಿರುವುದಕ್ಕಿಂತಲೂ ರಮೇಶನು ಹೆಚ್ಚು ಉಪಕಾರ ಮಾಡಿದ್ದಾನೆ. ಅವನು ಮಾಣಿಗೆ ಕಲೆಯ ಓನಾಮದಿಂದ ಎಲ್ಲಾ ರಹಸ್ಯಗಳನ್ನು ಹೇಳಿಕೊಡದಿದ್ದರೆ ನಿನ್ನ ಮಾಣಿ ಇವತ್ತು ಹೋಟಲಿನ ಬೋರ್ಡುಗಳನ್ನು ಬರೆದುಕೊಡುವ 'ಕಲಾವಿದ'ನಾಗಿ ಬಿಡುತ್ತಿದ್ದ. ರಮೇಶನ ವಿಚಾರ ದುಡುಕಿ ಆಡಿದ ಮಾತಿಗೆ ನೀನು ವಿಷಾದಪಡಬೇಕು."

ಮುಕುಂದರಾಯರ ವಿಶಾಲಹೃದಯದ ನುಡಿಗಳು ಮೂರ್ತಿಗೆ ತನ್ನ ಸಣ್ಣತನವನ್ನು ತೋರಿಸಿಕೊಟ್ಟವು. ಆತ್ಮೀಯತೆಯಿಂದ 'ಸಂದೇಶ' ಚಿತ್ರದ ಬಗ್ಗೆ ಆದ ಪ್ರಕರಣವನ್ನು ರಮೇಶನು ತನಗೆ ತಿಳಿಸಿದುದಕ್ಕೆ ಪ್ರತಿಯಾಗಿ ತಾನು ಅದರ ದುರುಪಯೋಗವನ್ನು ಮಾಡಿದುದಕ್ಕೆ ತುಂಬಾ ವ್ಯಥಿತನಾದನು. ಮರುಕ್ಷಣವೇ ರಮೇಶನ ಬಳಿ ಬಂದು ಆದರದಿಂದ ಅವನ ಭುಜದ ಮೇಲೆ ಕೈ ಹಾಕಿ

"ಕ್ಷಮಿಸು ಮಿತ್ರಾ, ಅವಿವೇಕದಿಂದ ನಾನು ಆಡಿದ ಕೆಟ್ಟ ಮಾತುಗಳನ್ನು. ಎಲ್ಲರೂ ತಪ್ಪಿ ನಡೆಯುತ್ತೇವೆ. ಕ್ಷಮಿಸುವುದು ದೊಡ್ಡ ಗುಣ. ಅದನ್ನು ನಾನಂತೂ ತೋರಿಸಲಿಲ್ಲ– ನೀನಾದರೂ ತೋರಿಸು" ಎಂದು ಕಳಕಳಿಯಿಂದ ನುಡಿದನು. ಅವನ ಕಣ್ಣಂಚಿನಲ್ಲಿ ನಿಂತಿದ್ದ ಹನಿಗುತ್ತರವಾಗಿ ರಮೇಶನ ಕಣ್ಣಂಚಿನಲ್ಲಿಯೂ ಹನಿ ನಿಂತಿತು. ಪಶ್ಚಾತ್ತಾಪದ

ಪವಿತ್ರ ಜಲದಲ್ಲಿ ಶುದ್ಧಿಗೊಂಡ ಗೆಳೆಯರ ಎರಡು ಮನಸ್ಸುಗಳು ಒಂದುಗೂಡಿದವು. ರಮೇಶನು ರಾಯರನ್ನು ಕುರಿತು

"ಭ್ರಮರಗೀತವನ್ನೇ ಹಾಕಿಬಿಡಿ ಮಾವಯ್ಯಾ. ಆ ಚಿತ್ರಶಿಲ್ಪಿಯ ವಿಚಾರ ಬರೆದು ತಿಳಿಸುವಂತೆ 'ಮಧುಕರ' ಕಾರ್ಯಾಲಯಕ್ಕೆ ಬರೆಯಿರಿ. ನೋಡುವ, 'ಮಣೀಂದ್ರ'ನು 'ಮಾಣಿಯೇ' ಆಗುತ್ತಾನೇನೋ ?"

ಆ ಮಾರ್ಮಿಕ ನುಡಿಯ ಹಿಂದಿದ್ದ ಅನುತಾಪ, ಅನುರಾಗ, ಆಶೆಗಳನ್ನು ಗ್ರಹಿಸಿ ರಾಯರೂ ಮೂರ್ತಿಯೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.

---

೧೪

ಕಲ್ಕತ್ತೆಯಿಂದ ಹಿಂದಿರುಗಿದ ಮೇಲೆ ಮಾಣಿಯ ರೀತಿಯೇ ಬದಲಾಯಿತು. ತನ್ನ ಚಿತ್ರಗಳು "ಮಧುಕರ" ಸಂಪಾದಕರಿಂದ ಕೊಳ್ಳಲ್ಪಟ್ಟ ವಿಚಾರವನ್ನು ಮಾತ್ರ ನೀಲರಂಜನನಲ್ಲಿ ಹೇಳಿದ್ದನಲ್ಲದೆ ಇತರ ಅನುಭವಗಳ ಬಗ್ಗೆ ಉಸಿರೆತ್ತಿರಲಿಲ್ಲ. ಅಭ್ಯಾಸಕ್ಕೆ ಕುಳಿತರೆ ಹಗಲು ರಾತ್ರಿಗಳೆನ್ನದೆ ಒಂದೇ ಸಮನೆ ಕುಂಚವಿಡಿದು ಉದ್ದಿಷ್ಟ ಕೃತಿಯನ್ನು ಮುಗಿಸುವನು ಮನಸ್ಸು ಬಾರದಿದ್ದರೆ ದಿವಸಗಳಾದರೂ ಬಣ್ಣ ಬಟ್ಟೆಗಳ ಕಡೆಗೇ ಕಣ್ಣು ಹಾಕನು. ಸಂಗೀತಾಭ್ಯಾಸಕ್ಕೆ ಕುಳಿತರೂ ಅದೇ ರೀತಿ. ಹೀಗಾಗಿ ಮೊದಲಿನ ಅಂಕೆ ತಪ್ಪುತ್ತಾ ಬಂತು. ಆಗಾಗ್ಗೆ ನಂದಾಲಾಲ ಗುರುಗಳೂ ಇದನ್ನು ಸೂಕ್ಷ್ಮವಾಗಿ ಸೂಚಿಸುತ್ತ ಬಂದರು. ಮನಸ್ಸಿನ ಸ್ಥಿತಿಯು ಆಕಾರಗಳೆಂಬಂತೆ ಕೃತಿಗಳ ಮೇಲೂ ಒಂದು ಬಗೆಯ ಅಸ್ಥಿರತೆಯು ಮೂಡುತ್ತ ಬಂತು.

ಈ ಬಗೆಯ ಜಂಜಡದ ಕಾರಣವು ನೀಲರಂಜನನಿಗೆ ಗೊತ್ತಾಗಲಿಲ್ಲ. ಮಾಣಿಯಿಂದಲೇ ತಿಳಿದುಕೊಳ್ಳಬೇಕೆಂಬ ಅವನ ಪ್ರಯತ್ನವು ವಿಫಲವಾಯಿತು. ಅವನೀಶನು ಸದುತ್ತರ ಕೊಡದೆ ಹೋದನು. ಮಾಣಿಯ ಮನಸ್ಸಿಗೆ ಶಾಂತಿಯುನ್ನೀಯಬೇಕೆಂದು ಮಾಡಿದ ತನ್ನ ಪ್ರಯತ್ನಗಳೆಲ್ಲಾ ಅಸಾರ್ಥಕವಾದುದಕ್ಕೆ ತುಂಬ ದುಃಖಿತನಾದನು.

ಒಂದು ದಿನ ಭೋಜನವನ್ನು ತೀರಿಸಿಕೊಂಡು ಮಾಣಿಯು ತನ್ನ ಕೋಣೆಗೆ ಬರುವ ವೇಳೆಗೆ ಅಂಚೆಯವನು ಕೈಯ್ಯಲ್ಲೊಂದು ಪ್ಯಾಕೆಟ್ಟನ್ನು ಹಿಡಿದು ನಿಂತಿದ್ದನು. ತನಗೇ ಬಂದಿದ್ದ ಆ ಪ್ಯಾಕೆಟ್ಟನ್ನು ನೋಡಿ ಮಾಣಿಗೆ ಆತ್ಯಾಶ್ಚರ್ಯವಾಯಿತು. ಅಂಚೆಯವನ ರಶೀದಿಗೆ ರುಜುಹಾಕಿ ಕುತೂಹಲದಿಂದ ಒಳಗೆ ಬಂದು ಒಡೆದು ನೋಡಿದನು. ಪ್ಯಾಕೆಟ್ಟಿನಿಂದ ತೂಕವಾದ ಚಿನ್ನದ ಸರಪಳಿಯೊಂದು ಜಾರಿ ಕೆಳಗೆ ಬಿದ್ದಿತು. ಕೈಗೆ ತೆಗೆದುಕೊಂಡು ನೋಡಿದನು. ಕುತ್ತಿಗೆಗೆ ಹಾಕಿಕೊಳ್ಳುವ ಒಂದೆಳೆಯ ಚಿನ್ನದ ದಾರ, ಎದೆಯ ಮೇಲೆ ಬರುವಂತೆ ಒಂದು ಕೆಂಪಿನಿಂದ ಕೂಡಿದ 'ಹೃದಯ' ಮಾದರಿಯ ತಾಳಿ. ಅದನ್ನು ಕೈಯಲ್ಲಿ ಹಿಡಿದು ಪ್ಯಾಕೆಟ್ಟನ್ನು ಬಿಚ್ಚಿದನು. ಕಣ್ಣಿಗೆ ಬಿದ್ದ ನೋಟವು ಎದೆಯನ್ನು ಝಲ್ಲೆನಿಸಿತು. ತನ್ನ "ಶ್ಯಾಮಸುಂದರ" ಚಿತ್ರ, ಅದರ ಜೊತೆಯಲ್ಲಿ ತಾನು ಚಿತ್ರಿಸಿದ್ದ "ರೂಪಳ ಭಾವಚಿತ್ರ." — ಇವುಗಳೇಕೆ ಬಂದವು ಎಂದು ಯೋಚಿಸುತ್ತಿರುವಲ್ಲಿ ಒಂದು ಕಾಗದವು ಕಣ್ಣಿಗೆ ಬಿತ್ತು.

ಮಹಾಶಯಾ,

ಎರಡು ದಿವಸಗಳ ಹಿಂದೆ ಸಂಧ್ಯಾಸಮಯದಲ್ಲಿ ನನ್ನ ಸೋದರಿ ರೂಪಾ ಪರಲೋಕವಾಸಿಯಾದಳೆಂದು ತಿಳಿಸಲು ತುಂಬಾ ವಿಷಾದಿಸುತ್ತೇನೆ. ಐದು ದಿವಸಗಳ ವಿಷಮಶೀತಜ್ವರವೆಂದು ವೈದ್ಯರು ಅಭಿಪ್ರಾಯಪಟ್ಟಿದ್ದಾರೆ. ಸಾಯುವ ಕೆಲವು ಗಂಟೆಗಳ ತನಕ ಪ್ರಜ್ಞಾಹೀನಳಂತೆಯೇ ಇದ್ದಳು, ಅನಂತರ ತಮ್ಮ ಹೆಸರನ್ನು ಹಿಡಿದು ಕೂಗುವುದಕ್ಕೆ ಆರಂಭಿಸಿ ತಮ್ಮನ್ನು ಕಾಣದೆ ತತ್ತರಿಸಿದಳು. ಕೊನೆಗೆ ಈ ಎರಡು ಚಿತ್ರಗಳು, ತನ್ನ ಕೊರಳಲ್ಲಿದ್ದ ಹಾರಗಳನ್ನು ತನ್ನ ನಮಸ್ಕಾರಪೂರ್ವಕವಾಗಿ ತಮಗೆ ಕಳುಹಿಸಬೇಕೆಂದು ತಿಳಿಸುತ್ತಾ ಕಂಬನಿ ತುಂಬಿ, ಕಲೆಯಲ್ಲಿ ದೊಡ್ಡವರಾಗಿ ಮಡದಿ ಮಕ್ಕಳೊಂದಿಗೆ ಸುಖವಾಗಿರುವಾಗ ಒಮ್ಮೆಯಾದರೂ ತನ್ನನ್ನು ಜ್ಞಾಪಿಸಿಕೊಂಡರೆ ಧನ್ಯಳಾಗುತ್ತೇನೆಂದು ತಿಳಿಸಹೇಳಿದಳು.

ಈ ಸುದ್ದಿಯನ್ನೇ ಅಬನೀಶ ಬಾಬುಗಳಿಗೂ ತಿಳಿಸುವುದು.

ಇಂತು ದಾಸಿ – ಪ್ರೇಮಾ.

ಕಾಗದವನ್ನು ಓದುತ್ತಾ ಓದುತ್ತಾ ಸ್ತಂಭಿತನಾಗಿ ಮಾಣಿಯು ಕುಳಿತು ಬಿಟ್ಟನು. ನೀಲರಂಜನನು ಅವನನ್ನು ಮೆಲ್ಲನೆ ಕರೆದೊಯ್ದು ಹಾಸಿಗೆಯ ಮೇಲೆ ಮಲಗಿಸಿ ತಲೆಗೆ ನೀರು ತಟ್ಟಿ ಉಪಚರಿಸಿ ಕಾಗದವನ್ನು ಓದಿಕೊಂಡನು. ರೂಪಾ ಯಾರು ? ಪ್ರೇಮ ಯಾರು ? ಅವನಿಗೆ ಒಂದೂ ಬಗೆಹರಿಯದೆ ದೊಡ್ಡ ಸಮಸ್ಯೆಯಾಯಿತು.

ಸ್ವಲ್ಪ ಕಾಲ ಕಳೆಯಲು ಮಾಣಿಯು ಗಟ್ಟಿಯಾಗಿ ರೋದಿಸತೊಡಗಿದನು. ಅಸ್ಪಷ್ಟವಾದ ಮಾತುಗಳಿಂದ ನೀಲರಂಜನನಿಗೆ ರೂಪಳ ಪವಿತ್ರ ಪ್ರೇಮವನ್ನು ನಿರೂಪಿಸಿದನು. ಅಕಸ್ಮಾತ್ತಾಗಿ ಅಲ್ಲಿಗೆ ಬಂದ ಅವನೀಶನೂ ಕಾಗದವನ್ನು ಓದಿಕೊಂಡು ದುಃಖಿತನಾದನು. ಮಾಣಿಯ ಹೃದಯದಲ್ಲಿ ಏನೋ ಒಂದು ಕಂಪನ, ಏನೋ ಒಂದು ಬಗೆಯ ಪ್ರಚಂಡ ವೇದನೆ. ರೂಪಳ ಒಂದೊಂದು ಮಾತೂ ಜ್ಞಾಪಕಕ್ಕೆ ಬಂದು ಅವನ ದುಃಖವನ್ನು ನೂರ್ಮಡಿಸುತ್ತಿತ್ತು.

"ಮಹಾಶಯ, 'ಶ್ಯಾಮಸುಂದರ' ಚಿತ್ರವನ್ನು ಬರೆಯುವ ಯೋಗ್ಯತೆಯು ಕೆಟ್ಟ ಬಾಳಿನಿಂದ ಕುಂದಬಾರದು... ನೀವು ದೊಡ್ಡವರಾಗಿ ಇಂತಹದೇ ಅನೇಕ ಉತ್ಕೃಷ್ಟ ಕೃತಿಗಳನ್ನು ಮಾಡಬೇಕು." ಎಂಬ ಮಾತುಗಳು ಮತ್ತೆ ಮತ್ತೆ ಜ್ಞಾಪಕಕ್ಕೆ ಬರುತ್ತಿದ್ದವು.

"ಅಯ್ಯೋ, ಎಂತಹ ನಿರ್ಭಾಗ್ಯ. ಅಂತಹ ಜೀವ ನನ್ನ ಭಾಗಕ್ಕೆ ಇಲ್ಲದೆ ಹೋಯಿತಲ್ಲಾ" ಎಂದು ಚೀರಿದನು.

ನೀಲರಂಜನನು ಕಂಬನಿದುಂಬಿ ಸಂತೈಸತೊಡಗಿದನು. ದುಃಖದ ಕರಾಳ ಮೂರ್ತಿಯ ಮುಂದೆ ಒಬ್ಬೊಂಟಿಗನಾಗಿ ನಿಂತಿದ್ದ ಮಾಣಿಯ ನೆರವಿಗೆ ನಿಂತು ಅದನ್ನು ಎದುರಿಸಲು ಸಹಾಯ ಮಾಡುತ್ತಿದ್ದನು. ನೀಲರಂಜನನೂ ದುಃಖವನ್ನು ಕಂಡಿದ್ದನು. ತನ್ನ ಮುದ್ದಿನ ತಂಗಿಯನ್ನು ಸಾವು ಅಪಹರಿಸಿಕೊಂಡು ಹೋದದ್ದನ್ನು ನೋಡಿದ್ದನು. ಮಾತಿಗೆ ತಾಕದ ದುಃಖವನ್ನು ಮೂಕ ಸಹಾನುಭೂತಿಯಿಂದ ಉಪಶಮನಗೊಳಿಸುತ್ತಿದ್ದನು.

ರೂಪಳ ಮೇಲೆ ಅವನೀಶನ ಪ್ರೇಮವಿರಲಿಲ್ಲವಾಗಿ ಅವನಿಗೆ ಅವಳ ಸಾವು ದುಸ್ಸಹನೀಯವಾಗಿ ಕಂಡುಬರಲಿಲ್ಲ. ಒಬ್ಬ ಬೆಲೆವೆಣ್ಣಿಗೆ ಇಂತು ಹಲುಬುವ ಮಾಣಿಯ ಮೌಢ್ಯವನ್ನು ಕಂಡು ಅವನಿಗೆ ಅನುತಾಪದ

ಬದಲು ನಗೆಯೇ ಬಂದಿತು. ಆದರೆ ಆ ಭಾವನೆಯನ್ನು ನೀಲರಂಜನನೆದುರಿಗೆ ತೋರಲು ಬಯಸದೆ ಮಾಣಿಗೆ ನಾಲ್ಕು ಸಮಾಧಾನದ ಮಾತುಗಳನ್ನಾಡಿ ತನ್ನ ಕೋಣೆಗೆ ತೆರಳಿದನು.

ಮಾಣಿಯ ದೃಷ್ಟಿ ರೂಪಳ ಚಿತ್ರದ ಮೇಲೆ ಬಿತ್ತು. ಅದನ್ನೆತ್ತಿ ಆದರದಿಂದ ಎದೆಗಪ್ಪಿಕೊಂಡು "ರೂಪಾ–ರೂಪಾ" ಎಂದು ಚೀರುತ್ತಾ ನಿಶ್ಚೇತನನಾದನು.

---

೧೫

ವರ್ಷಾಂತ್ಯದ "ಕಲಾಪ್ರದರ್ಶನ"ಕ್ಕೆ ಎಲ್ಲ ಏರ್ಪಾಟುಗಳೂ ನಡೆಯುತ್ತಿದ್ದವು. ಸ್ವಯಂ ನಂದಾಲಾಲರೇ ನಿಂತುಕೊಂಡು ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ವಂಗೀಯ ಚಿತ್ರಕಲಾ ಸಂಪ್ರದಾಯದಲ್ಲಿ ಖ್ಯಾತರಾಗಿದ್ದ ಕಲಾವಿದರಿಗೆ ಪ್ರತ್ಯೇಕ ವಿಭಾಗವೊಂದು ಏರ್ಪಾಟಾಗಿತ್ತು. ಶಾಂತಿನಿಕೇತನದ ಕಲಾಭ್ಯಾಸಿಗಳ ಚಿತ್ರಗಳಲ್ಲಿ ಉತ್ತಮವಾದವು ಮತ್ತೊಂದೆಡೆಯಲ್ಲಿ ಅಂದವಾಗಿ ಅಲಂಕೃತವಾಗಿದ್ದವು. ಕಲಾಭ್ಯಾಸಿಗಳ ವಿಭಾಗದ ವ್ಯವಸ್ಥೆಯೂ ನೀಲರಂಜನನ ಪಾಲಿಗೆ ಬಂದಿತ್ತು.

ತಂಡೋಪತಂಡವಾಗಿ ಕಲ್ಕತ್ತೆ, ಡಾಕಾ, ಕಾಶಿ ಮೊದಲಾದ ನಗರಗಳಿಂದ ಕಲಾಪ್ರೇಮಿಗಳೂ, ಕಲಾವಿಮರ್ಶಕರೂ, ಪತ್ರಿಕಾಕರ್ತರೂ ಪ್ರದರ್ಶನಕ್ಕೆ ಬರಲಾರಂಭಿಸಿದರು. ನಿಸರ್ಗಕ್ಕೆ ಕಲೆಯೂ, ಕಲೆಗೆ ನಿಸರ್ಗವೂ ಪರಸ್ಪರ ಶೋಭೆಯನ್ನೀಯುತ್ತಾ ಶಾಂತಿನಿಕೇತನವನ್ನು ರಾಮಣೀಯಕ ಕ್ಷೇತ್ರವನ್ನಾಗಿಸಿ ಬಿಟ್ಟಿದ್ದವು.

ನೋಟಕರು ತಮಗೆ ಬೇಕಾದ ಚಿತ್ರಗಳನ್ನು ಮೆಚ್ಚುತ್ತಾ, ಕೊಳ್ಳುತ್ತಾ ಪ್ರದರ್ಶನದ ಪೂರ್ಣಲಾಭವನ್ನು ಪಡೆಯುತ್ತಿದ್ದರು. ಒಬ್ಬೊಬ್ಬರ ಲಕ್ಷ್ಯ ಒಂದೊಂದರ ಮೇಲೆ ಬೀಳುತ್ತಿತ್ತು. ಆದರೆ "ಪತಿತ ಪರಿವರ್ತನ" ಚಿತ್ರವು ಎಲ್ಲರ ಗಮನವನ್ನು ಸೆಳೆಯಲಾರಂಭಿಸಿತು. "ಒಂದು ಹರಕು ಮುರುಕು ದೇವಾಲಯದ ಒಳಭಾಗ. ಗರ್ಭಗುಡಿಯ ಹಿಂದಿನ ಗೋಡೆಯನ್ನು ಅಶ್ವತ್ಥವೃಕ್ಷವೊಂದು ಸೀಳಿಕೊಂಡು ಬೆಳೆದು ದೇವಸ್ಥಾನವನ್ನೆಲ್ಲಾ ಆಕ್ರಮಿಸಿ ಬಿಟ್ಟಿದೆ. ಸೌಮ್ಯಸುಂದರಿಯಾದ ವಿದ್ಯಾಭಿಮಾನಿ

ದೇವಿಯು ಪದ್ಮಪೀಠಸ್ಥೆಯಾಗಿ ಅಭಯ, ವರದ ಹಸ್ತಗಳನ್ನು ಧರಿಸಿದ್ದಾಳೆ. ಮುಖದಲ್ಲಿ ಜಗನ್ಮಾತೆಗೇ ಒಪ್ಪುವ ಲಾಲಿತ್ಯ, ಅನಂತಪ್ರೇಮ, ಅಪಾರ ಕರುಣೆ. ದೇವಿಯ ಎದುರಿಗೆ ಭಕ್ತನೊಬ್ಬನು ತಲೆ ತಗ್ಗಿಸಿ ಉದ್ದಂಡ ನಮಸ್ಕಾರದ ಕಾಣಿಕೆಯನ್ನರ್ಪಿಸಿದ್ದಾನೆ." ಚಿತ್ರದಲ್ಲಿನ ಸಾರಳ್ಯ, ಗಭೀರತೆ, ಹೃದಯವನ್ನು ಮುತ್ತುವ ಪಶ್ಚಾತ್ತಾಪಗಳು ಪ್ರೇಕ್ಷಕರನ್ನು ಆಶ್ಚರ್ಯಚಕಿತರನ್ನಾಗಿಸಿತು. ಇದನ್ನು ರಚಿಸಿದ ಶಿಲ್ಪಿ ಯಾರೆಂದು ಎಲ್ಲರೂ ಕೇಳುವವರೇ! ಚಿತ್ರಗಳನ್ನು ವಿವರಿಸುತ್ತಾ ಅಲ್ಲಿಯೇ ನಿಂತಿದ್ದ ನೀಲರಂಜನನು ಹೆಮ್ಮೆಯಿಂದ ತನ್ನ ಗೆಳೆಯನ ಕಲಾಕೌಶಲ್ಯವನ್ನು ವರ್ಣಿಸತೊಡಗಿದನು.

ತನ್ನ ಚಿತ್ರಗಳಿಗೆ, ಅದರಲ್ಲಿಯೂ "ಪತಿತಪರಿವರ್ತನ" – "ಶ್ಯಾಮಸುಂದರ" – "ಸಂದೇಶ"ಗಳಿಗೆ ದೊರೆತ ಮನ್ನಣೆಯು ಪ್ರಾಣಿಯನ್ನು ಒಮ್ಮೆಲೇ ಸ್ವರ್ಗಕ್ಕೊಯ್ದಿತು. ದೊಡ್ಡ ದೊಡ್ಡ ವಿಮರ್ಶಕರು ದೊಡ್ಡ ದೊಡ್ಡ ಮಾತುಗಳಲ್ಲಿ ತನ್ನ ಚಿತ್ರಗಳ ಬಗ್ಗೆ ಬರೆಯುತ್ತಿದ್ದ ಲೇಖನಗಳನ್ನು ಸಂಗ್ರಹಿಸತೊಡಗಿದನು. ಅವುಗಳನ್ನು ಬಾಯಿಪಾಠ ಮಾಡಿಕೊಂಡು ಗೆಳೆಯರಿಗೂ, ಸಹಪಾಠಿಗಳಿಗೂ ಹೇಳತೊಡಗಿದನು. ಅನೇಕ ಪತ್ರಿಕಾಸಂಪಾದಕರಿಂದ ಚಿತ್ರಗಳಿಗೆ ಆಹ್ವಾನಗಳು ಬರತೊಡಗಿದವು. ಅವುಗಳಲ್ಲಿ "ಮಧುಕರ" ಪತ್ರಿಕೆಯ ಸಂಪಾದಕರು ಬರೆದ ಒಂದು ಕಾಗದವು ಪ್ರಾಣಿಯ ಮನಸ್ಸಿಗೆ ವರ್ಣನಾತೀತವಾದ ಆನಂದವನ್ನು ತಂದಿತು. ತನ್ನ ಚಿತ್ರಗಳು ಎಷ್ಟು ದೊರೆತರೂ ಬೇಕೆಂದು "ಆನಂದ" ಪತ್ರಿಕೆಯ ಸಂಪಾದಕರು ಬರೆದಿದ್ದ ಕಾಗದವನ್ನು ಒಡೆದು ನೋಡಿದನು. "'ಆನಂದ' ಪತ್ರಿಕೆಯ ಸಂಪಾದಕರಿಗೆ ನನ್ನ ಗುರುತು ಸಿಕ್ಕಿರಬಹುದೇ – ಇರಲಾರದು – ಸಿಕ್ಕಿದ್ದರೆ ಅಪರಿಚಿತರಿಗೆ ಬರೆಯುವಂತೆ ಹೀಗೆಂದಿಗೂ ಬರೆಯಲಾರರು" ಎಂದು ಸಮಾಧಾನಗೊಂಡನು. "ನನ್ನ ನಾಡು ನನ್ನ ಕಲೆಯನ್ನು ಮೆಚ್ಚುತ್ತಿದೆ" ಎಂಬ ಭಾವನೆಯು ಮನಸ್ಸಿಗೆ ಹೊಳೆದೊಡನೆಯೇ ಮಿಕ್ಕ ಎಲ್ಲರ ಮೆಚ್ಚುಗೆಯೂ ತೃಣಪ್ರಾಯವಾಗಿ ಕಂಡು ಬಂತು. "ಮೂರ್ತಿಯವರು ಏನು ಅಭಿಪ್ರಾಯಪಡುವರೋ – ರಮೇಶರಾಯರು ಏನನ್ನುವರೋ ?" ಎಂದು ಆಲೋಚಿಸುವನು. ಮರುಕ್ಷಣವೇ ಅವರೆಲ್ಲರೂ ಒಪ್ಪುದಿದ್ದಗೆ ಮುಕುಂದರಾಯರು ಹೀಗೆ ಬರೆಯುತ್ತಿದ್ದರೇ ಎಂದು ಸಮಾಧಾನ ತಾಳಿದನು.

ಬೇಸಿಗೆಯ ರಜೆಯು ಆರಂಭವಾಯಿತು. ವಿದ್ಯಾರ್ಥಿಗಳು ತಮ್ಮ ತಮ್ಮ ಮನೆಗಳಿಗೆ ಹೊರಡಲು ಅಣಿಯಾದರು. ಅವರಲ್ಲಿ ನೀಲರಂಜನನೂ ಒಬ್ಬ. ಗೆಳೆಯ ಮಾಣಿಯನ್ನು ಬಿಟ್ಟು ಹೋಗಲು ಅವನ ಅರ್ಧ ಜೀವವೇ ಉಡುಗಿ ಹೋಗಿತ್ತು; ಆದರೆ ಮಾಣಿಯು ಅವನೊಂದಿಗೆ ಅವನ ಊರಿಗೆ ಹೋಗಲು ಒಪ್ಪನು. ಬೇಸಿಗೆಯ ರಜೆಯಲ್ಲಿ ಚೆನ್ನಾಗಿ ಸಂಗೀತಾಭ್ಯಾಸ ವನ್ನು ಮಾಡಬೇಕೆಂದೂ ಎಲ್ಲಿಗೂ ಹೋಗಬಾರದೆಂದೂ ಮಾಣಿಯು ನಿರ್ಧರಿಸಿಬಿಟ್ಟಿದ್ದನು. ಇದರ ಜೊತೆಗೆ ಅವನೀಶನೂ ಎಲ್ಲಿಗೂ ಹೋಗುವು ದಿಲ್ಲವೆಂದು ಹೇಳಿ ಬಿಟ್ಟಿದ್ದನು.

ನೀಲನನ್ನು ಕಳುಹಿಸಿ ಬರಲು ಬೋಲಪುರದ ನಿಲ್ದಾಣಕ್ಕೆ ಮಾಣಿಯು ಅವನ ಜೊತೆ ಬಂದನು. ಗಾಡಿಯು ಬರಲು ಹತ್ತು ನಿಮಿಷಗಳಿದ್ದವು. ನೀಲನ ನಿರ್ವಿಣ್ಣತೆಯನ್ನು ಕಂಡು ಅವನನ್ನು ಹುರುಪುಗೊಳಿಸಲಾರಂಭಿಸಿದನು.

" ಎರಡು ತಿಂಗಳೊಳಗೇ ಬರುವೆಯಲ್ಲವೆ ನೀಲಾ ? "

" ಆದಕ್ಕೆ ಮುಂಚೆಯೂ ಬಂದರೂ ಬಂದೆ. ಆದರೆ ಅಲ್ಲಿನವರೆಗೆ ನಿನ್ನನ್ನು ಬಿಟ್ಟು ಹೇಗಿರಲಿ ? "

" ಊರಿನ ವಾತಾವರಣದಲ್ಲಿ ವಿಯೋಗವ್ಯಥೆಯು ಕಡಿಮೆಯಾಗು ವುದು. ನೀಲಾ ಯೋಚಿಸಬೇಡ. ಎಂತೆಂತಹುದೋ ಮರೆತು ಹೋಗುವುದು. ಇನ್ನು...."

ರೈಲು ಬಂದು ನಿಂತಿತು. ಬೋಲಪುರದ ನಿಲ್ದಾಣದಲ್ಲಿ ಒಂದೆರಡು ನಿಮಿಷಗಳಿಗಿಂತ ಹೆಚ್ಚಾಗಿ ನಿಲ್ಲುವುದಿಲ್ಲವಾದ್ದರಿಂದ ನೀಲನು ಗಡುಬಿಡಿ ಯಿಂದ ರೈಲು ಹತ್ತಿ ಕುಳಿತನು. ಮಾಣಿಯು ಕೈ ಹಿಡಿದು ಉಕ್ಕಿ ಬರುತ್ತಿದ್ದ ದುಃಖವನ್ನು ತೋರಗೊಡದೆ

" ನೀನು ಕಾಣೆ ಮಾಣಿ. ಎಂತಹುದನ್ನು ಬೇಕಾದರೂ ಮರೆಯ ಬಹುದು. ಆದರೆ ಗೆಳೆತನದ ಪವಿತ್ರ ಪ್ರೇಮವನ್ನು ಎಂದೆಂದಿಗೂ ಮರೆಯ ಲಾಗುವುದಿಲ್ಲ....ನನಗೆ " ಎಂದು ಹೇಳುತ್ತಿರುವಂತೆ ರೈಲು ಹೊರಟು ಬಿಟ್ಟಿತು. ದೃಷ್ಟಿಯಾಚೆ ರೈಲು ಹೋಗುವ ತನಕ ಗೆಳೆಯರ ನೋಟಗಳು ಪರಸ್ಪರರಲ್ಲಿ ನೆಟ್ಟು ಹೋಗಿದ್ದವು. ರೈಲು ಕಾಣದಾಗಲು ಮಾಣಿಯು ದೀರ್ಘವಾಗಿ ನಿಟ್ಟುಸಿರ್ಗರೆದು ಹಿಂತಿರುಗಿದನು. ತನ್ನ ಸಣ್ಣತನವನ್ನು

ನೆನೆದು ತಲೆ ತಗ್ಗಿಸಿದನು. ನೀಲನ ಅಂತರಂಗವನ್ನು ಸರಿಯಾಗಿ ಅರಿತುಕೊಳ್ಳದೆ ಅವನ ಮನಸ್ಸು ನೋಯುವಂತಹ ಮಾತನಾಡಿದುದಕ್ಕೆ ತುಂಬ ನೊಂದುಕೊಂಡನು. ಅಲ್ಪನಾದ ತನ್ನ ಮೇಲೆ ನೀಲನು ಸಂಕೋಚವಿಲ್ಲದೆ ಸುರಿದ ಸ್ನೇಹದ ಹೊನ್ನುಮಳೆಯನ್ನು ನೆನೆದು ತನ್ನ ಲೋಭಿತನವನ್ನು ಜರಿದುಕೊಂಡನು.

ಅವನೀಶನನ್ನು ಕಂಡೊಡನೆಯೇ ಮನಸ್ಸಿನ ಕ್ಲೇಶಗಳೆಲ್ಲಾ ದೂರವಾದವು. ಅವನ ಚತುರೋಕ್ತಿಗಳನ್ನು ಕೇಳುತ್ತ ಕೇಳುತ್ತ ತನ್ನ 'ಎಳಸುತನ'ವನ್ನು ನೋಡಿ ತಿರಸ್ಕಾರದಿಂದ ನಕ್ಕನು. ಆ ನಗುವನ್ನು ತಡೆಯಲು ಮನಸ್ಸಿನ ಗುಪ್ತಗುಹೆಗಳಿಂದೇಳುತ್ತಿದ್ದ ನೋವಿನ ಕಲಮಲವನ್ನು ನಿವಾರಿಸಲು ಅವನೀಶನನ್ನು ಹಾಡ ಹೇಳಿ ಅದರಲ್ಲಿ ಮೈಮರೆತನು. ಯಮನ್ ರಾಗದ ಗಝಲು. ಜಯದೇವ ಕವಿಯ ಗೀತಗೋವಿಂದದ ಒಂದು ನುಡಿ. ವಿರಹಸಂತಪ್ತನಾದ ಕೃಷ್ಣನು ರಾಧೆಯನ್ನು ಕಂಡು ಕಾತರನಾಗಿ, ಮೋಹಾಂಧನಾಗಿ "ನಿನ್ನ ಪಾದಗಳನ್ನು ನನ್ನ ತಲೆಯ ಮೇಲಿಡು" ಎಂದು ಬೇಡಿಕೊಳ್ಳುತ್ತಾನೆ. ಅವನೀಶನ ಉಜ್ವಲ ಕಂಠದಲ್ಲಿ ಅದನ್ನು ಕೇಳುತ್ತಾ ಕೇಳುತ್ತಾ ಮಾಣಿಯ ಮನಸ್ಸು ಕಳವಳಗೊಂಡಿತು. ತನ್ನ ಅನುಭವದ ಕಡೆಗೆ ಭಾವವು ಹರಿಯಿತು. ಮಾನವಜೀವನದ ಮೇಲೆ ಕಾಮ ಮೋಹಗಳ ಆಧಿಪತ್ಯವನ್ನು ಕುರಿತು ವಿಚಾರಸರಣಿಯು ಉದಿಸಲಾರಂಭಿಸಿತು. ಏನನ್ನೋ ಯೋಚಿಸುತ್ತಾ

"ಅವನೀ, ನಾಳೆ ಕಲ್ಕತ್ತೆಗೆ ಹೋಗೋಣವೇ?"

"ನಿನ್ನ ಸಂಗೀತಪಾಠ."

"ಅದೆಲ್ಲಿಗೆ ಹೋಗುತ್ತದೆ. ರಜೆ ಮುಗಿದ ಮೇಲೆ ಮತ್ತೆ ಆರಂಭಿಸಿದರಾಯಿತು."

"ನನ್ನಲ್ಲಿರುವ ಹಣ ಸಾಲದಲ್ಲಾ."

"ಹಣದ ಕೊರತೆಯೇಕಯ್ಯಾ. ಕೈಯಲ್ಲಿ ನಾಲ್ಕು ನೂರು ರೂಪಾಯಿಗಳಿವೆ. ಅವಕಾಶವಾದಾಗ ಒಂದೆರಡು ಚಿತ್ರಗಳನ್ನು ರಚಿಸಿ 'ಮಧುಕರ'ಕ್ಕೆ ಕೊಟ್ಟುಬಿಟ್ಟರಾಯಿತು."

" ಹಾಗಾದರೆ ಸರಿ. ನೀನು ಗಂಗೂಲಿಯವರನ್ನು ನೋಡಬೇಕೆಂದಿದ್ದೆ—ಬೇಕಾದರೆ ಅವರನ್ನು ಈಗ ನೋಡಲೂ ಬಹುದು."

" ಈಗ ನೋಡುವುದು ಬೇಡ. ನನ್ನ ಮೈಸೂರು ಗೆಳೆಯರನ್ನೂ ನೋಡುವುದಿಲ್ಲ.... ಸುಖವಾಗಿ ಎಲ್ಲಿಯಾದರೂ ಯಾರೂ ಕಾಣದಂತೆ ಇದ್ದು ಬಿಡೋಣ."

" ಸಮ್ಮತ – ಪ್ರಯಾಣ ಯಾವಾಗ ? "

" ನಾಳೆ. ಮೆಯಿಲ್ ಗಾಡಿಗೆ. "

---

## ೧೬

ಬೇಸಿಗೆ ರಜೆಯು ಮುಗಿಯುತ್ತ ಬಂತು. ಎಷ್ಟು ಹೊತ್ತಿಗೆ ಮಾಣಿಯನ್ನು ಕಾಣುವೆನೋ ಎಂಬ ಕುತೂಹಲವು ನೀಲರಂಜನನನ್ನು ಕೊರೆಯುತ್ತಿತ್ತು. " ತಾನು ಬರೆದ ಅಷ್ಟೊಂದು ಕಾಗದಗಳಿಗೆ ಮಾಣಿಯೇತಕ್ಕೆ ಮಾರುತ್ತರ ಬರೆಯಲಿಲ್ಲ. ಊರಿನಲ್ಲಿರಲಿಲ್ಲವೇನೋ—ಎಲ್ಲಿಗೂ ಹೋಗುವುದಿಲ್ಲವೆಂದು ಹೇಳಿದ್ದನಲ್ಲಾ— ಹೋದರೂ ನನಗೆ ಹೇಳದೆ ಹೋಗುವನೇ?" ಎಂದು ತನ್ನಲ್ಲಿಯೇ ತರ್ಕ ಮಾಡಿಕೊಂಡು ಬೋಲಪುರವನ್ನು ಸೇರಿದನು. ಕೂಲಿಯಾಳಿನ ಕೈಲಿ ಸಾಮಾನುಗಳನ್ನು ಹೊರಿಸಿಕೊಂಡು ಮಾಣಿಗಾಗಿ ಮನೆಯಿಂದ ಮಾಡಿಸಿ ತಂದಿದ್ದ ತಿಂಡಿಯ ಸಾಮಾನನ್ನು ತಾನೇ ಕೈಯಲ್ಲಿ ಹಿಡಿದುಕೊಂಡು ಶಾಂತಿನಿಕೇತನವನ್ನು ಸೇರಿದನು. ಅವಸರದಿಂದ ಓಡಿ ತನ್ನ ಕೋಣೆಯನ್ನು ನೋಡಿದನು. ಬಾಗಿಲಿಗೆ ಬೀಗ ಹಾಕಿತ್ತು. ಆಶ್ರಮ ಸಚಿವರ ಬಳಿಗೆ ಹೋಗಿ ವಿಚಾರಿಸಲು ಅವರು ಮಾತನಾಡದೆ ನೀಲರಂಜನನ ಕೈಗೆ ಕೀಲಿಯನ್ನಿತ್ತು ಆಶ್ರಮದ ಆಸ್ಪತ್ರೆಯ ಕಡೆ ಕೈತೋರಿದರು. ನೀಲನು ಕೋಣೆಯಲ್ಲಿ ಸಾಮಾನುಗಳನ್ನು ಬಿಸುಡಿ ಆಸ್ಪತ್ರೆಯ ಕಡೆಗೆ ಓಡಿದನು.

ಬಾಗಿಲಲ್ಲಿಯೇ ನಿಂತಿದ್ದ ಡಾಕ್ಟರು ನೀಲನಿಗೆ ಸ್ವಾಗತ ಬಯಸಿ ಯೋಗಕ್ಷೇಮವನ್ನು ವಿಚಾರಿಸಿದರು. ಅವರು ಆಡಿದ ಒಂದು ಮಾತೂ ನೀಲರಂಜನನ ಕಿವಿಗೇ ಬೀಳಲೊಲ್ಲದು. ದುಗುಡದಿಂದ " ಮಹಾಶಯ, ಮಾಣಿಯೆಲ್ಲಿ ? ಏನು ಖಾಯಿಲೆ " ಎಂದು ಕೇಳಿದನು. ಡಾಕ್ಟರು ದೀರ್ಘ

ವಾಗಿ ನಿಟ್ಟುಸಿರ್ಗರೆದು ಮಾಣಿಯ ಹಾಸಿಗೆಯ ಬಳಿ ಕರೆದೊಯ್ದರು. ಜ್ವರದಿಂದ ಬೆಂದು ಸೀದು ಹೋಗಿದ್ದ ಮುಖವನ್ನು ನೋಡಿ ದುಃಖದಿಂದ ಮುಖವನ್ನು ಮುಚ್ಚಿಕೊಂಡನು. ಆಗ ತಾನೆ ರೋಗಿಗೆ ನಿದ್ರೆ ಹತ್ತಿರಲು ಡಾಕ್ಟರು ನೀಲರಂಜನನನ್ನು ತಮ್ಮ ಆಫೀಸಿಗೆ ಕರೆದುಕೊಂಡು ಹೋದರು. ಮಾಣಿಯು ಖಾಯಿಲೆ ಇರುವಾಗ ಅವನ ವಿಚಾರ ಅನ್ಯಥಾ ಭಾವಿಸಿಕೊಂಡುದು ತನ್ನ ತಪ್ಪಾಯಿತೆಂದು ತುಂಬಾ ವಿಷಾದಗೊಂಡನು. ಡಾಕ್ಟರನ್ನು ಕುರಿತು

"ಏನು ಖಾಯಿಲೆ ಮಹಾಶಯ ?"

ಡಾಕ್ಟರ ನಿಟ್ಟುಸಿರೇ ಅದಕ್ಕೆ ಬಂದ ಉತ್ತರ.

"ನನ್ನಲ್ಲಿ ಹೇಳಿ ಮಹಾಶಯ. ನಾನು ಮಾಣಿಗೆ ಬೇರೆ...."

"ನನಗೆ ಗೊತ್ತು ಬಾಬು. ಆದರೆ ಯಾರಿಗೂ ತಿಳಿಯಬಾರದೆಂದು ನಾನು ಟೈಫಾಯಿಡ್ ಎಂದು ಹೇಳುತ್ತ ಬಂದಿದ್ದೇನೆ."

"ಹಾಗಾದರೆ ಟೈಫಾಯಿಡ್ ಅಲ್ಲವೇ ?"

"ಅಲ್ಲ– ಅದಕ್ಕೂ ಮಹಾ ಭಯಂಕರ."

"ಯಾವದು – ಹೇಳಿ – ನನ್ನಲ್ಲಿ ಹೇಳಿ."

ಕಾತರದಿಂದ ಬೇಡುತ್ತಿದ್ದ ನೀಲರಂಜನನ ಕಿವಿಯಲ್ಲಿ ಮೆಲ್ಲನೆ ರೋಗದ ಹೆಸರನ್ನು ಸುರಿದರು. ನೀಲರಂಜನನು ಅವಾಕ್ಕಾದನು. ಅವನ ದೃಕ್ಪಥದ ಮೇಲೆ ಅವನೀಶನ ಸ್ನೇಹ– ಈ ಮೂರು ತಿಂಗಳು ನಡೆಸಿದ ಜೀವನಗಳು ತೇಲಿದವು. ತನ್ನನ್ನೇ ದೂಷಿಸಿಕೊಂಡನು. ಮಾಣಿಯನ್ನು ತಾನು ಬಿಟ್ಟು ಹೋಗಬಾರದಾಗಿತ್ತೆಂದು ಹಲುಬಿದನು. ಬೇರೊಂದು ಭಯವು ಮೂಡಿತು. ಮತ್ತೆ ಡಾಕ್ಟರನ್ನು ಕುರಿತು

"ಪ್ರಾಣಕ್ಕೆ ಭಯವಿಲ್ಲವೇ ಮಹಾಶಯ."

"ಸದ್ಯಕ್ಕೆ ಆ ದೆಸೆಯು ದಾಟಿದೆ. ಬಹಳ ನಿಶ್ಶಕ್ತಿ. ಇನ್ನೂ ಒಂದೆರಡು ತಿಂಗಳು ಏನೂ ಮಾಡುವುದಕ್ಕಾಗುವುದಿಲ್ಲ. ಪೂರ್ಣ ವಿಶ್ರಾಂತಿ ಬೇಕು.– ನೀನು ಮಲಗು ಹೋಗು ಬಾಬು. ನಾನು ಜೋಕೆಯಿಂದ ನೋಡಿಕೊಳ್ಳುತ್ತೇನೆ."

"ನಾನು.... ತಮ್ಮ ಅಪ್ಪಣೆಯಾದರೆ.... ನೋಡಿಕೊಳ್ಳುತ್ತೇನೆ ಮಹಾಶಯ. ಮಾಣಿಗೂ.... ನನಗೂ..."

ಮುಂದೆ ಹೇಳಲಾರದೆ ಕಣ್ಣುಗಳಲ್ಲಿ ಹನಿ ತುಂಬಿದವು. ಡಾಕ್ಟರು "ಇಂದು ತುಂಬಾ ಆಯಾಸಗೊಂಡಿರುವೆ. ವಿಶ್ರಮಿಸಿಕೊಳ್ಳ ಹೋಗು. ನಾಳೆಯಿಂದ ನೀನೇ ನೋಡಿಕೊಳ್ಳುವೆಯಂತೆ – ಅಲ್ಲದೆ ಮಾಣಿ ಏಳುತ್ತಲೂ ನೀನು ಬಂದಿರುವ ಸುದ್ದಿಯನ್ನು ತಿಳಿಸುತ್ತೇನೆ" ಎಂದು ಸಮಾಧಾನ ಹೇಳಿ ಕಳುಹಿಸಿ ಕೊಟ್ಟರು. ನೀಲರಂಜನನಿಗೆ ಊಟ ನಿದ್ರೆಗಳು ಬೇಡವಾದವು. ಕೋಣೆಯಲ್ಲಿ ಮಾಣಿಯು ಹಾಸಿಗೆ ಪದಾರ್ಥಗಳಿದ್ದ ಜಾಗವನ್ನೇ ನೋಡುತ್ತ ಕುಳಿತನು. ಮಾಣಿಗೊದಗಿದ್ದ ವಿಪತ್ತು ಅವನ ಹೃದಯವನ್ನು ಝಲ್ಲೆನಿಸಿ ಬಿಟ್ಟಿತ್ತು. ರಾತ್ರಿಯೆಲ್ಲಾ ಅದೇ ಯೋಚನೆಯಲ್ಲಿ ಮುಂದಕ್ಕೆ ಹೋಗಲಾರದ ಹೊತ್ತನ್ನು ನೂಕುತ್ತ ಕಾಲಕಳೆದನು.

ಬೆಳಗಾಯಿತು. ರವಿಯ ಹೊಂಬೆಳಕನ್ನು ನೋಡಿ ನೀಲನ ಮನಸ್ಸಿನಲ್ಲಿಯೂ ಉದಯರಾಗ ಮೂಡಿತು. "ನಿನ್ನಿನ ಕತ್ತಲೆ ಹರಿದು, ಇಂದು ಉದಯರಾಗ ಮೂಡಿದಂತೆ ಮಾಣಿಯ ಜೀವನದ ಕತ್ತಲೆಯೂ ಬೇಗ ಹರಿದು, ಉದಯರಾಗವು ಮೂಡುವುದು" ಎಂದು ಅಂದುಕೊಂಡನು. ಎದ್ದು ಪ್ರಾತರ್ವಿಧಿಯನ್ನು ತೀರಿಸಿಕೊಂಡು ಆಸ್ಪತ್ರೆಯ ಬಳಿಗೆ ಓಡಿದನು. ಮಾಣಿಯು ಸ್ನಾನ ತೀರಿಸಿಕೊಂಡು ಮಲಗಿದ್ದನು. ಡಾಕ್ಟರು ನೀಲನ ಬರವನ್ನು ತಿಳಿಸಿದ್ದರು. ಎಷ್ಟು ಹೊತ್ತಿಗೆ ಬರುವನೋ ಎಂಬ ಆಶೆಯಿಂದ ಮನಸ್ಸು ತಡಬಡಿಸುತ್ತಿತ್ತು.

ನೀಲನು ಬಂದು ಎದುರಿಗೆ ನಿಂತನು. ನಾಲ್ಕು ಕಣ್ಣುಗಳು ಕೂಡಿದವು.

"ಮಾಣೀ–" ಎಂದು ಅಪ್ಪಿದನು.

"ನೀಲಾ – ಬಂದೆಯಾ. ನೀಲಾ" ಎಂದು ನೀಲನನ್ನು ಅಪ್ಪಿ ತಾಯಿಯ ಪುನರ್ದರ್ಶನವನ್ನು ಪಡೆದ ಮಗುವಿನಂತೆ ಕಂಬನಿಗರೆದನು. ಆವೇಗ ತೀರಿದ ಮೇಲೆ ಸೂಕ್ಷ್ಮವಾಗಿ ಮಾಣಿಯು ತನ್ನ ಖಾಯಿಲೆಯ ಕಾರಣವನ್ನು ಸೂಚಿಸಿದನು.

"ಕ್ಷಮಿಸು ನೀಲಾ ! ನಿನ್ನ ಗೆಳೆತನಕ್ಕೆ ನಾನು ಅಪಾತ್ರನು."

ಸರಳವಾದ ಒಂದು ಮುಗುಳ್ನಗೆಯಿಂದ ಮಾಣಿಯನ್ನು ನೇವರಿಸಿ ಗೆಳೆತನಕ್ಕೆ ಪಾತ್ರಾಪಾತ್ರತೆಯ ಬಂಧನವಿಲ್ಲವೆಂದು ನೀಲರಂಜನನು ತೋರಿಸಿದನು.

"ಅವನೀಶನೆಲ್ಲಿ ಮಾಣಿ?"

"ಅವನು ಆಶ್ರಮವನ್ನು ಬಿಟ್ಟುಬಿಟ್ಟ – ಬಡೋದೆಯಲ್ಲಿ ಗಾನವನ್ನು ಕಲಿಯಲಿಕ್ಕೆ ಹೊರಟು ಹೋದ."

ನೀಲನ ಮನಸ್ಸಿನ ದೊಡ್ಡ ಭಾರವು ಇಳುಹಿದಂತಾಯಿತು. ಮಾಣಿಯ ಮನಸ್ಸು ಬೇರೆ ಕಡೆ ತಿರುಗಿ ತನ್ನ ನೋವನ್ನು ಸ್ವಲ್ಪ ಮರೆಯಲೆಂದು ತನ್ನ ಪ್ರವಾಸದ ವರದಿಯನ್ನು ಒಪ್ಪಿಸಿ, ಅನಂತದಯೆಯಿಂದ ಕೂಡಿದ ದನಿಯಿಂದ

"ಚಿಂತಿಸಬೇಡ ಮಿತ್ರಾ, ಬಂದಿರುವ ವಿಪತ್ತು ಬೇಗ ನೀಗುವುದು. ಎಲ್ಲವೂ ಎಂದಿನಂತೆ ಸರಿಹೋಗುವುದು" ಎಂದು ಸಮಾಧಾನಗೊಳಿಸಿದನು. ಕೃತಜ್ಞತೆಯು ಮಾಣಿಯ ಕಣ್ಣುಗಳಲ್ಲಿ ಮಿಂಚಿ ಅವನ ಮುಖಕ್ಕೆ ಹೊಸ ಹೊಳಪನ್ನಿತ್ತಿತು.

ಒಂದು ತಿಂಗಳು ಕಳೆಯುವಷ್ಟರಲ್ಲಿ ಮಾಣಿಗೆ ಪೂರ್ಣ ಗುಣವಾಗುತ್ತ ಬಂತು. ಎದ್ದು ಓಡಿಯಾಡುವಷ್ಟು ದೇಹಕ್ಕೆ ಶಕ್ತಿಯೂ ಕೂಡುತ್ತ ಬಂತು. "ಇನ್ನೂ ಕೆಲವು ದಿವಸ ಅಭ್ಯಾಸಕ್ಕೆ ಕೂಡುವುದು ಬೇಡ" ಎಂದು ಡಾಕ್ಟರರ ಆಜ್ಞೆಯಾಗಿದ್ದುದರಿಂದ ತನ್ನ ಕೋಣೆಯಲ್ಲಿಯೇ ಕುಳಿತು ಗ್ರಂಥಗಳನ್ನು ಓದುತ್ತ ವಿಶ್ರಮಿಸಿಕೊಳ್ಳುತ್ತಿದ್ದನು. ಈ ಖಾಯಿಲೆಯು ಮಾಣಿಗೆ ಹೊಸ ಅನುಭವವನ್ನು ಕೊಟ್ಟಿತ್ತು. ಕಲ್ಕತ್ತೆಯ ಎರಡು ತಿಂಗಳ ಜೀವನದಿಂದ ಬಾಳಿನ ಸುಂದರ ತೆರೆಯ ಹಿಂದೆ ಅಡಕವಾಗಿದ್ದ ಮೋಸ, ಕಾಪಟ್ಯ, ಕ್ರೌರ್ಯಗಳ ಅರಿವವನಿಗಾಯಿತು. ಆಸ್ಪತ್ರೆಯ ವಾಸದಿಂದ ಅವನೀಶನಂತಹ ಗೆಳೆಯರಿಗೂ ನೀಲನಂತಹ ಗೆಳೆಯರಿಗೂ ಇರುವ ವ್ಯತ್ಯಾಸವು ತಿಳಿಯುತ್ತ ಬಂತು. ಎಲ್ಲಕ್ಕೂ ಹೆಚ್ಚಾಗಿ ತನ್ನ ಮನಸ್ಸು ಎಷ್ಟು ದುರ್ಬಲ – ಎಷ್ಟು ಶಕ್ತಿಹೀನ – ಎಷ್ಟು ಸಣ್ಣದಾದ ವಿಲೋಭನೆಗಳಿಗೆ ಅಧೀನವಾಗುವ ಪಾರತಂತ್ರ್ಯ ಎಂದು ಚಿಂತಿಸಿದನು. ಕವಿಗಳು, ಶಿಲ್ಪಿಗಳು, ಗಾಯಕರು ತೋರಿಸುವಂತೆ ಜೀವನವು ಕೇವಲ ಶಕ್ತಿ, ಸಂಯಮ, ಮನೋಧಾರ್ಢ್ಯಗಳಿಂದ ಮಾತ್ರವೇ ಕೂಡಿಲ್ಲ; ಅದಕ್ಕೂ ಹೆಚ್ಚಾದ ದುಶ್ಶಕ್ತಿ, ವಿಲೋಭನೆ, ಮನಶ್ಚಾಂಚಲ್ಯಗಳಿಂದ ಕೂಡಿದೆಯೆಂದು ಮನಗಂಡನು. ಸುಂದರವಾದುದರ ಪರಿಚಯವನ್ನು ಲೋಕಕ್ಕೆ ಹೇಗೆ ಕಲೆಯು ಉಂಟುಮಾಡಿ

ಕೊಡುತ್ತದೆಯೋ ಹಾಗೇ ಸುಂದರವಲ್ಲದುದರ ಪರಿಚಯವನ್ನೂ ಏತಕೆ ಮಾಡಿಕೊಡಬಾರದು ? – ಜೀವನದ ಎರಡು ಸ್ವರೂಪಗಳನ್ನೂ ಸರಿಯಾಗಿ ನೋಡಿ ಜನತೆಯು ತನ್ನ ಪ್ರಗತಿಯನ್ನು ಸಾಧಿಸಿಕೊಳ್ಳಲಿ. ಲೋಕವು ಎಲ್ಲ ಸುಂದರವೇ ಎಂಬ ತಪ್ಪು ಕಲ್ಪನೆಯಿಂದಲೇ ಆರಂಭಿಸಿ ಹೆಜ್ಜೆ ಹೆಜ್ಜೆಗೂ ಎಡವುವುದೇತಕ್ಕೆ ? ಎಂದು ಪ್ರಶ್ನಿಸಿಕೊಂಡನು. ಬೆಲೆವೆಣ್ಣುಗಳೆಲ್ಲಾ ರೂಪಳಂತೆಯೇ ಅಲ್ಲವೆ ಎಂದು ಭಾವಿಸಿಕೊಂಡುದಕ್ಕಲ್ಲವೇ ತನಗೀ ದುರವಸ್ಥೆಯು ಬಂದುದು ? ಎಂದು ಚಿಂತಿಸುತ್ತಾ ತನ್ನ ಕಲೆಯ ಮೂಲಕ ಜಗತ್ತಿಗೆ ಸತ್ಯದ ಪರಿಚಯ ಮಾಡಿ ಕೊಡುತ್ತ ಹೋಗಬೇಕೆಂದು ನಿರ್ಧರಿಸಿಕೊಂಡನು. ಕಲಾವಿದರು ತಮ್ಮ ಕೃತಿಗಳಲ್ಲಿ ತೋರಿಸಲು ಹಿಂಜರಿಯುತ್ತಿದ್ದ ನೋವಿನ, ದುಃಖದ, ಕಲ್ಮಷದ ಯಥಾರ್ಥಸ್ವರೂಪವನ್ನು ತಾನು ತೋರಿಸಿಕೊಡಬೇಕೆಂದು ಶಪಥಮಾಡಿದನು.

ಆದರೆ ಈ ನಿರ್ಧಾರವು ತನ್ನನ್ನು ಎಲ್ಲಿಗೆ ಒಯ್ಯಬಹುದೆಂಬ ಕಲ್ಪನೆಯು ಮಾಣಿಗೆ ಬರಲಿಲ್ಲ. ಜೀವನದ ಒಂದೆರಡು ಅನುಭವಗಳಿಂದ ಅದರ ಉದ್ದಗಲವನ್ನು ಅಳೆಯ ಹೊರಟಾಗ ಕಣ್ಣಿಗೆ ಬೀಳುವುದು ಯಥಾರ್ಥಸ್ವರೂಪವಲ್ಲ; ಅದರ ವಿಪರ್ಯಾಸವೆಂಬ ಜ್ಞಾನವು ಆಗ ಮಾಣಿಗೆ ಹೊಳೆಯಲಿಲ್ಲ.

ಎಂದಿನಂತೆ ವ್ಯಾಸಂಗ ಸಾಗುತ್ತಾ ಬಂತು. ಮೊದಲಿಗಿಂತಲೂ ಹೆಚ್ಚಿನ ಆಸಕ್ತಿಯನ್ನು ಮಾಣಿಯು ಕಲಾಭ್ಯಾಸದಲ್ಲಿ ತೋರಿಸುತ್ತಿರುವುದನ್ನು ಕಂಡು ನಂದಾಲಾಲ ಗುರುಗಳು ತುಂಬಾ ಸಂತೋಷಭರಿತರಾದರು. ನೀಲರಂಜನನಿಗಂತೂ ಗೆಳೆಯನ ಕಲಾಪ್ರಗತಿಯನ್ನು ಕಂಡು ಹಿಡಿಯಲಾರದಷ್ಟು ಸಂತೋಷ. ಆದರೆ ಮಾಣಿಯ ಮನಸ್ಸಿನಲ್ಲಾಗುತ್ತಿದ್ದ ಘೋರ ಸಂಗ್ರಾಮವು ಇಬ್ಬರ ಕಣ್ಣಿಗೂ ಬೀಳಲಿಲ್ಲ. ತನ್ನ ಅಂತರಂಗದ ವಿಪ್ಲವ ಹೊರಗೆ ಗೊತ್ತಾಗದಿರಲೆಂದು ಮಾಣಿಯು ಉಗ್ರಸಾಧಕ ವೃತ್ತಿಯನ್ನು ಅವಲಂಬಿಸಿರುವುದು ಅವರ ಗಮನಕ್ಕೆ ಬರಲಿಲ್ಲ. ಒಂದು ಕಾಲದಲ್ಲಿ ಸಂಗೀತದಲ್ಲಿ ಉಂಟಾಗಿದ್ದ ಆಸಕ್ತಿಯೂ ಕಡಿಮೆಯಾಗುತ್ತಾ ಬಂದಿತು.

ಕಲ್ಕತ್ತೆಯ ಕಡೆಗೆ ಮನಸ್ಸು ಎಳೆಯುತ್ತಿದ್ದರೂ ಪೂರ್ವಾನುಭವದ ಸ್ಮರಣೆಯು ಅವನನ್ನು ತಡೆಯುತ್ತಿತ್ತು. ಒಂದೊಂದು ಸಲ “ ಕಲೆಯಲ್ಲಿ

ಕಲಿತು ಬರುವುದೇನು ? – ಚಿತ್ರಕಲಾ ಲಕ್ಷಣವನ್ನೂ ತಿಳಿದದ್ದಾಯಿತು. – ಸಾಕಷ್ಟು ಕಾಲ ಗುರುಚರಣತಲದಲ್ಲಿ ಕುಳಿತು ಕಲಿತದ್ದೂ ಆಯಿತು. ಇನ್ನು ಏತಕ್ಕೆ ಸ್ವತಂತ್ರವಾಗಿ ಕಲಾವ್ಯವಸಾಯವನ್ನಾರಂಭಿಸಬಾರದು ” ಎಂದು ಮಾಣಿಯ ಮನಸ್ಸಿಗೆ ಬಂದಿತು. ಒಂದು ದಿವಸ ಧೈರ್ಯ ಮಾಡಿ ನಂದಾಲಾಲರಲ್ಲಿ ಆ ವಿಚಾರವನ್ನು ಪ್ರಸ್ತಾಪಿಸಿದುದಕ್ಕೆ ಅವರು ಗಂಭೀರವಾಗಿ “ ಕಲೆಯಲ್ಲಿ ಕಲಿಯುವುದು ಮುಗಿಯುವುದೇ ಇಲ್ಲ ” ಎಂದು ಉತ್ತರ ವಿತ್ತಿದ್ದುದು ಅವನಿಗೆ ತಾತ್ಕಾಲಿಕ ಸಮಾಧಾನವನ್ನುಂಟುಮಾಡಿತ್ತು.

ಶಿಷ್ಯನಲ್ಲಿ ಬೆಳೆಯುತ್ತಿದ್ದ ವಿಚಿತ್ರ ಮನಃಪ್ರವೃತ್ತಿಯು ನಂದಾಲಾಲ ಗುರುಗಳ ಗಮನಕ್ಕೆ ಬಾರದೆ ಹೋಗಲಿಲ್ಲ. ತಮ್ಮ ಮೇಲ್ಪಂಕ್ತಿಗೆ ವಿರುದ್ಧ ವಾದ ಮಾರ್ಗವನ್ನು ಮಾಣಿಯು ಅನುಸರಿಸುತ್ತಿದ್ದುದೂ, ಪ್ರತಿಯೊಂದು ಸಂದರ್ಭದಲ್ಲಿ ತನ್ನ ಮಾರ್ಗವನ್ನು ಸರಿಯೆಂದು ಸಾರಲು ಎದೆ ತಟ್ಟಿ ನಿಲ್ಲು ತ್ತಿದ್ದುದೂ ಅವರಿಗೆ ಒಂದು ಬಗೆಯ ಆನಂದವನ್ನೇ ಇತ್ತಿದ್ದರೂ, ಸಾಧಕ ಸ್ಥಿತಿಯ ಚಿತ್ತೈಕಾಗ್ರತೆಗೆ ಈ ಅಡ್ಡ ಹಾದಿಯು ವಿಘ್ನ ತರುತ್ತದೆ ಎಂದು ದೃಢವಾಗಿ ನಂಬಿದ್ದರು. ಪ್ರತಿಯೊಂದು ಕೃತಿಯನ್ನೂ ಬೇಗ ಬೇಗ ಮುಗಿಸಿ ಹೊಸ ಹೊಸ ಕೃತಿಗಳಿಗೆ ಕೈಹಾಕುವ ಚಪಲವು ಮಾಣಿಯಲ್ಲಿ ಕಾಣಬರು ತ್ತಿದ್ದಿತೇ ವಿನಾ ನೈಪುಣ್ಯವನ್ನು ತೋರಿಸುವ ಕಡೆಗೆ ಅವನ ಲಕ್ಷ್ಯವು ಅಷ್ಟಾಗಿ ಹೋಗುತ್ತಿರಲಿಲ್ಲ. ಈಚೆಗಂತೂ ಚಿತ್ರದ ಸ್ಥೂಲಾಭಿಪ್ರಾಯವು ಹೇಗಾದರೂ ಸರಿ, ನೋಟಕನಿಗೆ ತಿಳಿದರೆ ಸಾಕು, ಅದರಲ್ಲಿ ಸೂಕ್ಷ್ಮವಾದ ಕಲಾಪ್ರತಿಭೆಯಿರದಿದ್ದರೂ ಚಿಂತೆಯಿಲ್ಲ ಎಂಬ ತತ್ತ್ವದ ಜನಕನಾಗಿ ಮಾಣಿಯು ತನ್ನ ಕೃತಿಗಳ ಮೂಲಕ ಅದನ್ನು ಸಹಪಾಠಿಗಳಿಗೆ ಬೋಧಿಸ ತೊಡಗಿದನು.

ಒಂದು ದಿನ “ ಮಧುಕರ ” ಕಾರ್ಯಾಲಯದಿಂದ ಬಂದ ಪತ್ರವು ಮಾಣಿಯನ್ನು ಅಲ್ಲೋಲ ಕಲ್ಲೋಲ ಮಾಡಿ ಬಿಟ್ಟಿತು.

ಮಹಾಶಯ,

ಈಚೆಗೆ ನಾವು ಪ್ರಕಟಿಸಿದ ತಮ್ಮ “ ಅಪ್ಸರೆ ” ಎಂಬ ನಗ್ನಚಿತ್ರವು ನಮ್ಮ ಪಾಠಕರ ಗಮನವನ್ನು ವಿಶೇಷವಾಗಿ ಸೆಳೆದಿದೆ. ನಾವು ಪ್ರಕಟಿಸಿದ ಅನೇಕ ಚಿತ್ರಗಳಿಗಿಂತಲೂ ಅದು ಉತ್ತಮವಾಗಿದೆಯೆಂದು ಬಹಳ

ಮಂದಿಯ ಅಭಿಪ್ರಾಯ. ತಾವು ದಯೆಯಿಟ್ಟು ಒಪ್ಪಿಬಂದು ನಮ್ಮ ಸಂಪಾದಕ ಮಂಡಳಿಯನ್ನು ಸೇರಿ 'ಚಿತ್ರಶಾಖೆ'ಯ ವ್ಯವಸ್ಥಾಪಕರಾದರೆ ಬಹಳ ಸಂತೋಷಿಸುವೆವು. ಆರಂಭದಲ್ಲಿ ೧೫೦ ರೂ.ಗಳ ಮಾಸಾಶನವನ್ನು ಕೊಡಲು ನಮ್ಮ ಮಂಡಳಿಯು ಒಪ್ಪಿರುತ್ತದೆ. ತಾವು ನಮಗಾಗಿ ರಚಿಸುವ ಚಿತ್ರಗಳನ್ನುಳಿದು ಬೇರೆ ಚಿತ್ರಗಳು ಬೇಕಾದಲ್ಲಿ ಅವುಗಳನ್ನು ಉಚಿತ ಬೆಲೆಗೆ ಕೊಳ್ಳಲು ಸಿದ್ಧರಿದ್ದೇವೆ.

ತಾವು ಈ ವಿನಂತಿಯನ್ನು ಮಾನ್ಯಮಾಡಿ ಕೂಡಲೆ ಮಾರೋಲೆ ಬರೆಯಬೇಕಾಗಿ ಪ್ರಾರ್ಥನೆ

ಇಂತು ಅನೇಕ ನಮಸ್ಕಾರಗಳು
**ಸುರೇಶಬಾಬು**

ಇಂತಹ ಅವಕಾಶವನ್ನು ಬಿಟ್ಟರೆ ಮುಂದೆ ಪಶ್ಚಾತ್ತಾಪಪಡಬೇಕಾಗುವುದೇನೋ ಎಂಬ ಚಿಂತೆ. ಆದರೆ ಐದು ವರ್ಷ ವ್ಯಾಸಂಗ ಮಾಡುತ್ತೇನೆಂದು ಗುರುದೇವನಿಗೆ ಮಾತುಕೊಟ್ಟು ಈಗ ವಚನಭ್ರಷ್ಟನಾಗುವುದೇ ಎಂಬ ಕೊರಗು. ನೀಲರಂಜನನ ಸಲಹೆ ಕೇಳಿ ಅನಂತರ ಗುರುದೇವನಲ್ಲಿ ವಿಷಯವನ್ನು ಪ್ರಸ್ತಾಪಿಸುವುದೆಂದು ನಿರ್ಧರಿಸಿದನು.

ಪತ್ರವನ್ನು ಆಗತಾನೆ ಕೋಣೆಗೆ ಬಂದ ನೀಲನ ಕೈಗೆ ಅದೂ ಇದೂ ಮಾತನಾಡುತ್ತ ಮೆಲ್ಲನಿತ್ತನು. ನೀಲನು ಓದಿಕೊಂಡು ಮರುಮಾತನಾಡದೆ ಮೋಣಿಗೆ ಹಿಂದಕ್ಕಿತ್ತು ಸುಮ್ಮನಿದ್ದನು.

"ಏನು ಹೇಳುತ್ತೀ ನೀಲಾ? ಸುರೇಶಬಾಬುವಿಗೆ ಏನೆಂದು ಉತ್ತರ ಬರೆಯಲಿ?"

"ನಿನಗೆ ಹೇಗೆ ಸೂಕ್ತವೋ ಹಾಗೆ ಬರೆ."

"ನನಗೆ ಸೂಕ್ತತೋರಿದಂತೆ ಬರೆಯಲು ನಿನ್ನ ಸಲಹೆ ಕೇಳಬೇಕಾಗಿತ್ತೇನು? ಇದಕ್ಕೆ ನೀನೇನು ಹೇಳುವೆ?"

"ಗುರುಗಳನ್ನೊಮ್ಮೆ ಕೇಳಿ ಬಿಡು. ಅನಂತರ ಬೇಕಾದರೆ ಮಾತನಾಡೋಣ."

"ಹಾಗೆಯೇ ಆಗಲಿ ನಡೆ." ಎಂದಿಬ್ಬರೂ ನಂದಾಲಾಲರ ಮನೆಯ ಕಡೆ ಹೊರಟರು. ಮನೆಯ ಕೈಸಾಲೆಯಲ್ಲಿ "ಪ್ರಬಾಸಿ" ಪತ್ರಿಕೆ

ಯನ್ನೋದುತ್ತ ಕುಳಿತಿದ್ದ ನಂದಾಲಾಲರು ಆದರದಿಂದ ಗೆಳೆಯ ರಿಬ್ಬರನ್ನೂ ಬರಮಾಡಿಕೊಂಡು, ಚಹವನ್ನು ತರಿಸಿತ್ತು, ಬಂದ ವಿಷಯ ವೇನೆಂದು ವಿಚಾರಿಸಿದರು. ನೀಲರಂಜನನು ವಾಣಿಯಿಂದ ಕಾಗದ ವನ್ನು ತೆಗೆದುಕೊಂಡು ಗುರುಗಳ ಕೈಗಿತ್ತನು. ಗುರುಗಳದನ್ನು ಓದುತ್ತ ಮುಖದಲ್ಲಿ ತೇಲುತ್ತಿದ್ದ ಭಾವಗಳನ್ನು ತೋರಗೊಡದಿರಲೆತ್ನಿಸುತ್ತ ವಾಣಿಯ ಕೈಗೆ ಕಾಗದವನ್ನಿತ್ತರು. ವಾಣಿಗೆ ಯೋಚನೆಗಾರಂಭವಾಯಿತು. ಮುಂದಕ್ಕೆ ಮೌನವ್ರತದಿಂದ ಸುಖವಿಲ್ಲವೆಂದು ಗ್ರಹಿಸಿ

" ಏನು ಮಾಡಲಿ ಮಹಾಶಯ ? "

" ನಾನು ಏನು ಹೇಳಲಪ್ಪಾ ಜಗನ್ಮಾತೆಯು ಹೇಗೆ ಬುದ್ಧಿ ಕೊಡು ತ್ತಾಳೋ ಹಾಗೆ ಮಾಡು. ನಿನ್ನ ಅಭ್ಯುದಯವು ನನಗೆ ಮುಖ್ಯ. "

" ಐದು ವರ್ಷಗಳು ಕಲಿಯಬೇಕೆಂದು ಹಿಂದೆ ಅಪ್ಪಣೆಯಾಗಿತ್ತು."

" ನೀನು ಹೋಗಬೇಕೆಂದು ನಿರ್ಧರಿಸುವಲ್ಲಿ ಆ ವಚನದಿಂದ ನಿನ್ನನ್ನು ವಿಮುಕ್ತನನ್ನಾಗಿಸುತ್ತೇನೆ. ಯೋಗಕ್ಕೆ ಹೇಗೋ ಹಾಗೆ ಕಲೆಗೂ ಭಯಂಕರ ಉಪಾಸನೆ ಬೇಕು — ಚಿತ್ತಶುದ್ಧಿಬೇಕು. ಇಂತಹ ಆಸೆಗೆ ಮನಸ್ಸುಗೊಟ್ಟು ಇಲ್ಲಿ ಬಲವಂತಕ್ಕೆ ನಿಂತು ತ್ರಿಶಂಕುಸ್ವರ್ಗವಾಸಿ ಯಾಗುವುದಕ್ಕಿಂತಲೂ ಕಲ್ಕತ್ತೆಗೆ ಹೋಗುವುದೇ ಲೇಸು. ನೋಡು ಕೀರ್ತಿ, ಕನಕ, ಸುಖ, ಸಂತೋಷಗಳನ್ನೊದಗಿಸುವ ಕಲೆಗೂ ವಿರಾಗದಲ್ಲಿ ಬೆಳೆದು ನೋವಿನ ಉಡುಗೆರೆಯನ್ನು ನೀಡುವ ಕಲೆಗೂ ಬಹಳ ವ್ಯತ್ಯಾಸ ವಿದೆ. ಇದರಲ್ಲಿ ದೈಹಿಕ ಸುಖವಿಲ್ಲ - ಕೀರ್ತಿಯಿಲ್ಲ ಆದರೆ ಮನಸ್ಸಿ ಗೊಂದು ತೆರನ ಅವರ್ಣನೀಯ ಆನಂದವುಂಟಾಗುತ್ತದೆ. ಹಣದ ಸಾಮ್ಯಕ್ಕೆ ನಿಲುಕದ ಆನಂದ ನಿನ್ನದಾಗುತ್ತದೆ. ಇವೆರಡರ ಮಧ್ಯೆ ನೀನು ಒಂದನ್ನು ಆಯ್ದುಕೊಳ್ಳಬೇಕು. — ಯೋಚಿಸು. ದುಡುಕಬೇಡ. ನಿನ್ನ ಜೀವನದ ಪರೀಕ್ಷಾಸಮಯವಿದು. ನಿನ್ನ ಮುಂದಿನ ಜೀವನಕ್ಕೆ ಈಗ ಅಸ್ತಿಭಾರ ಹಾಕುವ ಸನ್ನಿವೇಶ ಒದಗಿದೆ. -ಯೋಚಿಸಿ ನಿರ್ಧರಿಸು. "

" ನಾನು ಎಲ್ಲೇ ಇರಲಿ ಮಹಾಶಯ — ನಿಮ್ಮ ಕೃಪೆಯನ್ನು ಮರೆ ಯಲಾರೆ. "

"ಅದನ್ನು ಹೇಳಬೇಕೆ ವಾಣಿ. ನನಗೆ ಗೊತ್ತುಂಟು. ನನ್ನ ಶಿಷ್ಯರೇ ನನ್ನ ಆತ್ಮ. ನೀನು ಎಲ್ಲೇ ಇದ್ದರೂ ನಂದಲಾಲ ನಿನ್ನ ಆತ್ಮೀಯ ನೆಂಬುದನ್ನು ಮರೆಯದಿರು. ಯಾವಾಗ.... ಏನು ಬೇಕಾದರೂ.... ನನಗೆ ನಿರ್ವಂಚನೆಯಿಂದ ಬರೆ." ಎಂದು ಹೇಳುತ್ತ ಗುರುಗಳ ಕಂಠವು ಬಿಗಿದು ಬಂದಿತು. ಇದೊಂದು ಉತ್ತಮ ಜೀವ ತಮ್ಮ ಕೈಬಿಟ್ಟು ಹೋಗುವು ದೆಂದು ಅವರ ಅಂತರ್ವಾಣಿಯು ಎಚ್ಚರಗೊಟ್ಟಿತು. ವಾಣಿಯು ಗುರುಗಳ ಎರಡು ಪಾದಗಳನ್ನೂ ಹಿಡಿದು ನಮಸ್ಕರಿಸಿ ನೀಲರಂಜನ ನೊಂದಿಗೆ ಹೊರಟನು.

ಮಾರನೆಯ ಬೆಳಿಗ್ಗೆ ಕಲ್ಕತ್ತೆಗೆ ಹೊರಟು ಬಿಡಬೇಕೆಂದು ನಿರ್ಧರಿಸಿ ದನು. ಶಾಂತಿನಿಕೇತನದಲ್ಲಿ ತನ್ನ ಕೊನೆಯ ರಾತ್ರಿಯನ್ನು ಎದೆಯನ್ನು ಕಲ್ಲುಮಾಡಿ ಕಳೆಯಲು ಮನಸ್ಸು ಮಾಡಿದನು. ಎಳೆ ಬೆಳದಿಂಗಳು ರಾತ್ರಿ ಯಲ್ಲಿ ನೀಲನೊಂದಿಗೆ ಹೊರಟು ಒಂದು ಪ್ರದಕ್ಷಿಣೆ ಮಾಡಿ ಬಂದನು. ತಾನು ಮೆಚ್ಚಿ ಚಿತ್ರಕಲೆಗೆ ದಾಂಪತ್ಯ ಕೂಡಿಸಿದ್ದ ವಾತಾವರಣವು ವಿರಹ ವ್ಯಥೆಯಿಂದ ಒಳಲುತ್ತಿರುವಂತೆ ತೋರಬಂತು. ಪರದೇಶಿಯಂತೆ ಬಂದ ತನ್ನನ್ನು ನಿರ್ವಂಚನೆಯಿಂದ ಸ್ವೀಕರಿಸಿ ತಾಯ್ತನವನ್ನು ತೋರಿದ ಶಾಂತಿ ನಿಕೇತನವನ್ನು ಬಿಟ್ಟು ಹೋಗಲು ಬಹಳ ಕಠಿಣವೆನಿಸಿತು.... ಆದರೆ ಬಿಟ್ಟು ಹೋಗಲು ನಿರ್ಧರಿಸಿದ್ದ. ಎಲ್ಲಕ್ಕೂ ಹೆಚ್ಚಾಗಿ ನೀಲನನ್ನು ಬಿಟ್ಟು ಹೋಗಲು ಮನಸ್ಸು ಬಹಳ ವಿಷಾದಗೊಂಡಿತ್ತು. ದುಃಖದಾವೇಗದಲ್ಲಿ ಮಾತುಗಳು ಕೂಡಾ ಹೊರಡದಾದವು.

X X X X

ಅದೇ ಬೋಲುಪುರ.. ಅದೇ ನಿಲ್ದಾಣ.. ಅದೇ ರೈಲು.. ಆದರಿ ವೆಲ್ಲಾ ಒಂದು ಕನಸೋ ಎಂಬ ಭ್ರಮೆ ನೀಲರಂಜನನಿಗೆ. ಕನಸಾಗಬಾರ ದೇತಕ್ಕೆ ? ಸತ್ಯದ ಈ ಘೋರ ರೂಪಕ್ಕಿಂತಲೂ ಕನಸಿನ ಮಿಥ್ಯೆಯೇ ಎಷ್ಟೋ ಹಿತವೆಂದು ಅವನ ನಂಬಿಕೆ. ಎರಡು ಜೀವಗಳನ್ನು ಗೆಳೆತನದ ಭವ್ಯ ಬಂಧುರ ಬಂಧನದಿಂದ ಕೂಡಿಸಿ ಮತ್ತೆ ವಿಂಗಡಿಸುವ ಅಮಾನುಷ ಶಕ್ತಿಯನ್ನು ಶಪಿಸಿದನು.

ರೈಲು ಬಂದು ನಿಂತಿತು. ಮಾಣಿಯು ಹತ್ತಿ ಕುಳಿತನು. ನೀಲನು ಹೊರಗೇ ನಿಂತು ಅವನ ಕೈ ಹಿಡಿದನು. ಇಬ್ಬರ ಕಂಬನಿಗಳೂ ಕೂಡಿದವು. ಮೊದಲನೆಯ ಘಂಟೆಯೂ ಆಯಿತು. ನೀಲನ ಎದೆಯು ಬಡಿದುಕೊಳ್ಳ ಲಾರಂಭಿಸಿತು. "ನಿಜವಾಗಿಯೂ ಮಾಣಿಯು ನನ್ನನ್ನು ಬಿಟ್ಟು ಹೋಗು ವನೇ ? ಹೌದು ಹೋಗುವನು . . ಇನ್ನು ಒಂದೇ ನಿಮಿಷದೊಳಗಾಗಿ . . ರೈಲೂ ಸಿದ್ಧವಾಗಿದೆ." ಕೈಹಿಡಿತದಲ್ಲಿ ತನ್ನ ಆವೇಗವನ್ನು ತೋರಿದನು. ಎರಡನೆಯ ಘಂಟೆಯೂ ಆಯಿತು. ರೈಲು ಮೆಲ್ಲನೆ ಮುಂದೆ ನಡೆಯಿತು. ಸ್ವಲ್ಪ ದೂರ ಹಾಗೆಯೇ ರೈಲಿನೊಂದಿಗೆ ನಡೆಯುತ್ತಾ

"ಮಾಣೀ, ಕಾಗದವನ್ನಾದರೂ ಬರೆಯುವೆಯಲ್ಲವೇ ?"

"ಖಂಡಿತವಾಗಿಯೂ ನೀಲಾ – ನೀಲಾ – ನೀಲಾ" ಎಂದು ಅವನ ಮುಖದ ಮೇಲೆ ನೇವರಿಸಿ ನೀಲನ ಕೈಬಿಟ್ಟನು. ರೈಲು ವೇಗವಾಗಿ ಹೊರಟು ಹೋಯಿತು.

## ೧೭

"ಪತಿತ ಪರಿವರ್ತನ"ವನ್ನು ರಚಿಸಿದ ಕೈಯೇ "ಅಪ್ಸರೆ" ಯನ್ನೂ "ಚಂಚಲ ಸುಂದರಿ"ಯನ್ನೂ ರಚಿಸಿತೆಂದು ಮೂರ್ತಿ ನಂಬ ಲೊಪ್ಪನು. ನಿರ್ವಹಣದಲ್ಲಿ ಅದೇ ಕೈವಾಡ – ಅದೇ ತೆರನ ಆತ್ಮನಂಬಿಕೆ– ಬಣ್ಣಗಳ ಸಾಮರಸ್ಯ – ಆದರೂ ಆ ಚಿತ್ರಗಳ ಕರ್ತೃವು ಇದನ್ನೂ ಸೃಷ್ಟಿಸಿ ದ್ದಾನೆಂದು ನಂಬಲು ಒಪ್ಪದಿರಲು ಸಾಧನಗಳನ್ನು ಹುಡುಕಲೆತ್ನಿಸಿದನು. ಮಣೀಂದ್ರನ ಪೂರ್ವೋತ್ತರವನ್ನು ತಿಳಿಸಹೇಳಿ "ಆನಂದ ಕಾರ್ಯಾಲಯ" ದಿಂದ ಬರೆದಿದ್ದ ಪತ್ರಕ್ಕೆ

ಮಹಾಶಯ,

ಬಾಬು ಮಣೀಂದ್ರರು ಕೆಲವು ಕಾಲ ಶಾಂತಿನಿಕೇತನ ಕಲಾಶಾಲೆಯ ಆಚಾರ್ಯರಾದ ನಂದಾಲಾಲ ಬಸುಯವರಲ್ಲಿ ವ್ಯಾಸಂಗ ಮಾಡಿದರು. ಈಗ ನಮ್ಮ ಕಾರ್ಯಾಲಯದಲ್ಲಿ ಕಲಾವಿಭಾಗದ ಅಧಿಕಾರಿಗಳಾಗಿದ್ದಾರೆ. ಇಷ್ಟು

